ಸಾಹಿತ್ಯಾಂಜಲಿ ಪುಷ್ಪ-ಎರಡು

# ಸರ

— ಕವನ ಸಂಕಲನ —

ಅಮ್ಮೆಂಬಳ ಶಂಕರ ನಾರಾಯಣ, ವಿದ್ವಾನ್

ಮಂಗಳೂರು

ಸಾಧನ ಪ್ರಕಟನಾಲಯ, ಧಾರವಾಡ

೧೯೪೭

# ಮುನ್ನುಡಿ

ನನ್ನ ತರುಣ ಮಿತ್ರರಾದ, ಮಂಗಳೂರಿನ ಅಮ್ಮೆಂಬಳ ಶಂಕರ ನಾರಾಯಣರ ಕವನಸಂಗ್ರಹಕ್ಕೆ ಮುನ್ನುಡಿಯನ್ನು ಬರೆಯಬೇಕಾದರೆ ನನಗೊಂದು ವಿಶೇಷ ಸಂತೋಷವಿದೆ. ಅವರು ನನಗೆ ಅಷ್ಟು ಸಮೀಪದ ಪರಿಚಯದವರಲ್ಲ. ಅವರು ಕವಿಗಳು ಎಂಬ ಮಾತನ್ನು ಬಿಟ್ಟರೆ ಉಳಿದ ಕುಲಗೋತ್ರ ವಿಚಾರ ನನಗೆ ಒಂದಿಷ್ಟೂ ಗೊತ್ತಿಲ್ಲ. ಈ ಸಂಗ್ರಹದ ಐದನೆಯ ಎಳೆಯಲ್ಲಿ ತಮ್ಮ ಜೀವನದ ಕೆಲವು ಮಣಿಗಳನ್ನು ಅವರು ಪೋಣಿಸಿದ್ದಾರೆ; ಅವರ ಇನ್ನು ಬೇರೆ ಕವನಗಳನ್ನು ಕೃತಿಗಳನ್ನು ನಾನು ನೋಡಿದ್ದೇನೆ; ಮುಖಪರಿಚಯವು ಒಂದೆರಡು ಸಲ ಆಗಿದೆ. ಉಳಿದ ಮುನ್ನುಡಿಗಳಲ್ಲಿ ಬರೆದಂತೆ ನನಗೆ ತಿಳಿದ ಹೊಳೆದ ಎರಡು ಮಾತುಗಳನ್ನು ಇಲ್ಲಿಯೂ ಬರೆಯಬಹುದಾಗಿತ್ತು. ಆದರೆ ಕವಿಗಳು ಒಂದಲ್ಲ ಎರಡು ಕಾಗದಗಳಲ್ಲಿ ಮುನ್ನುಡಿಯ ರೂಪರೇಷೆಯನ್ನು ತಿಳಿಸಿದ್ದಾರೆ ನನಗೆ. "ಮುನ್ನುಡಿಯಲ್ಲಿ ನೀವು—ನಾನು ಮೊದಲು ಕೇಳಿಕೊಂಡಂತೆ, ಹೊಸಗನ್ನಡ ಕವಿತೆಯ ಭೂತಭವಿಷ್ಯವನ್ನೂ, ಸಂಪ್ರದಾಯ ಮತ್ತು ಹೊಸ ರೀತಿಯ ತಿಕ್ಕಾಟವನ್ನೂ, ಪ್ರಾಸವನ್ನು ಬಿಟ್ಟುದರ ಔಚಿತ್ಯವನ್ನೂ, ನನ್ನ ಕವನಗಳ ರಸಸ್ಥಾನ ನಿರೂಪಣೆಯನ್ನೂ ಬರೆಯಬೇಕಾಗಿ ವಿನಯದಿಂದ ಕೇಳಿಕೊಳ್ಳುತ್ತೇನೆ" ಎಂದು ಒಕ್ಕಣಿಸಿದ್ದಾರೆ.

ಈ ವಿಷಯಗಳಲ್ಲಿ ಕೆಲವನ್ನು ಕುರಿತು ಈ ಮೊದಲೇ ಸ್ವಂತತ್ರ ಪ್ರಬಂಧಗಳಲ್ಲಿ ಕೆಲವು ವಿಚಾರಗಳನ್ನು ನಾನು ಪ್ರಕಟಿಸಿದ್ದೇನೆ. ಇದಲ್ಲದೆ ಇಂಥ ಮಹತ್ವದ ವಿಷಯಗಳನ್ನು ಕುರಿತು ವಿಸ್ತಾರದ ವಿಮರ್ಶೆ ಬೆಳೆಸಬೇಕೆಂದರೆ ಅದಕ್ಕೆ ಮುನ್ನುಡಿ ಬಹಳ ಇಕ್ಕಟ್ಟಿನ ಸ್ಥಳ. ಆದರೂ ದಿಗ್ದರ್ಶಕವಾಗಿ, ಸೂಚಕವಾಗಿ, ಆ ಮಾತುಗಳನ್ನು ಮತ್ತೊಮ್ಮೆ ಮತ್ತೊಂದು ರೀತಿಯಲ್ಲಿ ಮಂಡಿಸಿದರೂ ತಪ್ಪಲ್ಲವೆಂದೇ ನನ್ನ ಮಿತ್ರರ ಅಪೇಕ್ಷೆಯಂತೆ ಒಂದೊಂದು ವಿಷಯವನ್ನು ಕುರಿತು ನಾಲ್ಕು ಮಾತು ಬರೆಯುತ್ತೇನೆ.

ಹೊಸಗನ್ನಡ ಕವಿತೆಯು ಹುಟ್ಟಿಯೆ ಬಹಳ ದಿನಗಳಾಗಿಲ್ಲ. ಅದರ ಭೂತವು ಭಯಂಕರವಾಗಿ ದೊಡ್ಡದಿಲ್ಲ. ಅದೊಂದು ವಾಮನಮೂರ್ತಿ, ಇದೇ ತೊಟ್ಟಿಲ-ಕಂಡು, ಜೋಗುಳ ಕೇಳಿ ಸುಖನಿದ್ರೆ, ಸುಖದ ಎಚ್ಚರಗಳನ್ನು ನಿರ್ನಿಮಿತ್ತ ಹಾಸ್ಯದಿಂದ ಅನುಭವಿಸುತ್ತಿರುವ ಇನ್ನೂ ತಿಂಗಳೂ ಆಗದ ಎಳೆಗೂಸು. ಅದರ ಭವಿಷ್ಯ, ಅದರ ಪ್ರಕೃತಿ ಹೀಗೇ ಉಳಿದರೆ ಅಷ್ಟು ಆಶಾದಾಯಕವಾಗಿಲ್ಲ ಎಂದು ಮುಖಲಕ್ಷಣ ನೋಡಿ ಹೇಳಿದ ಚಾಣಾಕ್ಷ ಚಾಣಕ್ಯರೂ, ಅದರ ಜನ್ಮಕಾಲದ ಗ್ರಹಗಳೂ ಬಾಲಾರಿಷ್ಟವನ್ನು ಸೂಚಿಸುತ್ತವೆ ಎಂದು ಮರ್ಮಭೇದಕವಾಗಿ ಸಾರಿದ ಕೆಲವು ಸ್ವಯಂಜ್ಯೋತಿಷ್ಕರು ಅಲ್ಲಲ್ಲಿ ಆಗೀಗ ಕೂಗಿದಂತೆ ಕೇಳಿಸಿದರೂ, ಹೊಸಗನ್ನಡ ಕವಿತೆಯ ಆಪ್ತ ಬಾಂಧವರಾರಿಗೂ ಅಂಥ ಎದೆಯೊಡಿಕೆ ಹುಟ್ಟಿಲ್ಲ; ಇದರ ಭವಿಷ್ಯವು ಭೂತಕ್ಕಿಂತಲೂ ಉಜ್ವಲವಾಗಿದೆ ಎಂದೇ ನಿರೀಕ್ಷೆಯನ್ನುಂಟುಮಾಡಿದೆ. ಬೆಳೆಯುವ ಯಾವ ಜೀವಕ್ಕೂ ಭವಿಷ್ಯವು ಸಾಫಲ್ಯದ ಮೂಲಕ ಉತ್ಕರ್ಷಕಾರಿಯಾಗಿರುತ್ತದೆ. ನಷ್ಟ ಪದಾರ್ಥವು ಯಾವಾಗಲೂ ನಷ್ಟವೇ. ಕವಿತೆಯ ಉತ್ಕರ್ಷವು ಪ್ರಧಾನವಾಗಿ ಕವಿಯ ಉನ್ನತ ಜೀವನ ಮತ್ತು ಕರ್ಮಕೌಶಲವನ್ನು ಅವಲಂಬಿಸಿದೆ. ಆದರೆ ಅದಕ್ಕೆ ಸಾಮಾಜಿಕ ಬೆಲೆ ಬರಬೇಕಾದರೆ ಸಾಮಾನ್ಯ ಜನರ ಶಿಕ್ಷಣದ ಮಟ್ಟದಂತೆಯೆ, ಸಂಸ್ಕೃತಿಯ ಮಟ್ಟವೂ ಏರಬೇಕು. ಜನರು ಕವಿಯಿಂದ ಪಕ್ಷಪಾತಿ ಆವೇಶವನ್ನು ಅಪೇಕ್ಷಿಸಬಾರದು. ಕವಿಯು ಪಕ್ಷಾತೀತ ಪಕ್ಷಿ; ಎರಡೂ ಪಕ್ಷಗಳನ್ನು ತನ್ನ ಉಡ್ಡಾನಕ್ಕೂ ಗತಿಗೂ ಅನುಕೂಲವಾಗುವಂತೆ ಸಮತೋಲ ಸಾಧಿಸಿಕೊಂಡು ನಿರಾಯಾಸ ವಿಲಾಸದಲ್ಲಿ ತನ್ನ ಗುರಿಯತ್ತ ಸಾಗುವ ಜೀವಿ ಅವನು. ಪಕ್ಷಪಾತ, ಪಕ್ಷಘಾತಗಳು ಸಾಮಾಜಿಕ ಜೀವನಕ್ಕೂ ಅಹಿತಕಾರಿಗಳೇ. ಇಂಥ ಸಮಾಜದಲ್ಲಿಯೇ ರಸಿಕತೆ ಬೆಳೆಯುತ್ತದೆ. ಈ ರಸಿಕತೆಯ ರತ್ನವು ವಿವಿಧ ಮುಖದ ವೈಭವವನ್ನು ಪಡೆಯಬೇಕಾದರೆ ಅಕಾಂಡತಾಂಡವದ ಪಾಂಡಿತ್ಯಕ್ಕಿಂತಲೂ ಕುಂದಣಗಾರನ ಕಣ್ಣು ಬೇಕು, ನೀರಿನ ನಿರ್ಮಲತೆ ಬೇಕು ವಿಮರ್ಶಕನ ಹೃದಯದಲ್ಲಿ. ವಿಮರ್ಶಕರೂ ಕವಿಗಳೂ ಕೂಡಿ ವಾಚಕರನ್ನು ದಿಗ್ಭ್ರಮೆಗೊಳಿಸಬಾರದು, ನಿಜ; ಕವಿಗಳಿಗೂ ವಾಚಕರಿಗೂ ವಿರೋಧವುಂಟು ಮಾಡಿ ಮೋಜು ನೋಡುವ ಗೇಲಿಗಾರರಾಗ

ಬಾರದು ವಿಮರ್ಶಕರು, ಇದೂ ನಿಜ; ಆದರೆ ಈ ನಿಜವು ನೆಲೆಸಿಲ್ಲ
ಬೇಕಾದರೆ ಜನರ ಸಂಸ್ಕೃತಿಯೇ ತನ್ನ ಹೀನತೆಯನ್ನು ಕಳೆದುಕೊಳ್ಳುವ
ಸಾಧನೆಯಾಗಬೇಕು. ಕವಿ-ವಿಮರ್ಶಕ-ವಾಚಕ ಈ ಮೂವರಲ್ಲಿಯೂ
ಈ ಗುಣಗಳುದಯವಾಗಿದೆ, ಇನ್ನೂ ಹೆಚ್ಚಾಗಿ ಆದೀತು ಎಂದು ನಾನು
ನಂಬಿದ್ದೇನೆ. ಇದರ ಸಿದ್ಧಿಗಾಗಿ ನಾವೆಲ್ಲರೂ ನಮ್ಮೆಲ್ಲರ ದುರ್ವಾಸನಾ
ಹೃದಯದ ಕಶ್ಮಲಗಳನ್ನು ತಳ್ಳಿಹಾಕಲು ಸಿದ್ಧರಾಗಬೇಕು. ಆತ್ಮಹೃದ
ಯದ ಉತ್ತುಂಗ ಶಿಖರದಲ್ಲಿ ಕಾವ್ಯದ ಉಗಮವಿದೆ. ಎಲ್ಲ ಜೀವಹಂಸ
ಗಳೂ ಸ್ವಾಭಾವಿಕವಾಗಿಯೇ ಆ ಮಾನಸೋತ್ತರ ಸರೋವರದ ಹೆಜ್ಜೆ
ಮೂಡದ ಹಾದಿಯನ್ನು ಬಲ್ಲವು. ಆದಕ್ಕೆ ತೊಂದರೆ ಬರದಂತೆ ನಮ್ಮ
ಜೀವನಸಂಸ್ಕೃತಿ ಮತ್ತು ನಮ್ಮ ಸಾಹಿತ್ಯಕೃತಿ ಸಾಗಬೇಕು. 'ಗೊಲ್ಗೊಥಾ'
'ಮಂಕುತಿಮ್ಮನ ಕಗ್ಗ,' 'ನವರಾತ್ರಿ' 'ಬಾಳ ದೇಗುಲ' 'ಅಗ್ನಿಹಂಸ'
'ನವನೀತ ರಾಮಾಯಣ' 'ಗೋಕುಲ ನಿರ್ಗಮನ'ಗಳು ಕನ್ನಡ
ಕಾವ್ಯದ ಭವಿಷ್ಯವು ಉಜ್ವಲವಾಗಿದೆಯೆಂದೇ ಸಾರುತ್ತಿವೆ.

ಸಂಪ್ರದಾಯ, ಹೊಸರೀತಿಗಳ ತಿಕ್ಕಾಟವು ಎರಡು ತಪ್ಪು ತಿಳು
ವಳಿಕೆಗಳ ತಿಕ್ಕಾಟ ಎಂದು ನಾನು ತಿಳಿದಿದ್ದೇನೆ. ಸಾಂಪ್ರದಾಯಿಕರು
ಸ್ಥಾಯಿತತ್ತ್ವಗಳಿಗೂ ಹೊಸ ಮಾರ್ಗದವರು ಸಂಚಾರಿಗಳ ನವೀನತೆಗೂ
ಹವಣು ಮೀರಿ ಮಹತ್ತ್ವ ಕೊಡುವದರಿಂದಲೇ ತಿಕ್ಕಾಟ ಉಂಟಾಗು
ವದು. ಆದರೆ ಕಾವ್ಯವು ಯಾವಾಗಲೂ ಸ್ಥಾಯಿ ಸಂಚಾರಿಗಳ ಸಂಘರ್ಷ
ದಲ್ಲಿ ರಸತ್ವಾಭಿಮುಖವಾದಾಗಲೇ ಕ್ಷೇಮಕಾರಿಯಾಗುವದು. ಇಲ್ಲ
ದಿದ್ದರೆ ನಾಲಿಗೆ ಕೆಟ್ಟಬಾಯಿಗೆ ಅಪಥ್ಯವೇ ರುಚಿ ಎನಿಸುವಂತೆ ಆಭಾಸ
ಸೃಷ್ಟಿಯೇ ಕೆಲಕಾಲ ಸಾಹಿತ್ಯ ರಂಗದಲ್ಲಿ ತಾಂಡವವಾಡುವದು. ಆದರೆ
ತನ್ನ ದೃಷ್ಟಿದೋಷದ ಅರಿವಿಲ್ಲದ ಎಗ್ಗರು ಕಂಡದ್ದನ್ನೆಲ್ಲ ಆಭಾಸವೆಂದು
ಹುಯಿಲೆಬ್ಬಿಸಿದರೆ, ಅಥವಾ ಸ್ವಪಕ್ಷಪಾತಿತ್ವದ ನಟನೆಗಾಗಿ 'ಎಣ್ಣೆಗೆ
ಬೆಣ್ಣೆ ಸಣ್ಣ' ಎಂಬ ಚಾರ್ವಾಕತೆಯನ್ನು ಹಬ್ಬಿಸಿದರೆ ಅದು ಆ ಸಮಾ
ಜದ ಕರ್ಮದುರ್ವಿಪಾಕವೆಂದೇ ತಿಳಿಯಬೇಕು. ಸಂಪ್ರದಾಯ, ಹೊಸ
ರೀತಿಯೊಳಗಿನ ಅಸಹನೆ, ಮಾತ್ಸರ್ಯ, ಪರಗುಣಾಂಧತ್ವ, ಸ್ವಪ್ರಶಂಸೆ
ಗಳು ಮಾಮೂಲಿಯ ಪರಸ್ಪರ ಪ್ರಶಂಸೆಯಂತೆಯೆ ಕಡಿಮೆಯಾಗಬೇಕು.

ಪರಸ್ಪರ ನಿಂದೆಯಂತೂ ಯಾವ ಸಂಪ್ರದಾಯದಲ್ಲಿಯೂ, ಹೊಸರೀತಿಯಲ್ಲಿಯೂ ಗರ್ಹ್ಯವೇ ಸರಿ. ಕನ್ನಡದ ವಿವಿಧ ಸಂಪ್ರದಾಯಗಳನ್ನನುಸರಿಸಿಯೇ ಹೊಸ ಛಂದಸ್ಸು ಹಿಗ್ಗುತ್ತಲಿದೆ; ಸಾಹಿತ್ಯದ ವಿವಿಧ ಪ್ರಕಾರಗಳು ರುಪುಗೊಳುತ್ತಿವೆ. ಮಾರ್ಪಾಡು ಮತ್ತು ಬೆಳವಣಿಗೆಯು ಜೀವಂತಿಕೆಯ ಕುರುಹು. ಮಾರ್ಗ ಮತ್ತು ದೇಸಿಗಳು ಪರಸ್ಪರ ಸಂಹಾರಕಗಳೆಂದು ಯಾವ ಶಾಸ್ತ್ರವೂ ಒಪ್ಪಿಲ್ಲ; ಔಚಿತ್ಯ ಮಾತ್ರ ಬೇಕು.

ಪ್ರಾಸವನ್ನು ಬಿಡುವದೇ ಆಗಲಿ, ಹಿಡಿಯುವದೇ ಆಗಲಿ, ಯಾವ ದೊಡ್ಡ ಗುಣವೂ ಅಲ್ಲ, ದೋಷವೂ ಅಲ್ಲ. ಪ್ರಾಸವು ಛಂದದ ಒಂದು ಲಕ್ಷಣ. ಈ ಲಕ್ಷಣವನ್ನು ವಿವಿಧ ರೀತಿಯಾಗಿ ಸಾಧಿಸಬಹುದು. ಸಾಮಾನ್ಯವಾಗಿ ಸಂಸ್ಕೃತದ ಮಹಾಕಾವ್ಯ ಸಾಹಿತ್ಯವು ಪ್ರಾಸರಹಿತವಾಗಿಯೇ ಇದೆ. ಆದರಿಂದ ಅದಕ್ಕೆ ಯಾವ ದೋಷವೂ ತಟ್ಟಿಲ್ಲ. 'ಕನ್ನಡಕ್ಕೆ ಸತತಂ ಪ್ರಾಸಂ' ಎಂಬುದೇನು ಅನುಲ್ಲಂಘನೀಯ ವೇದವಾಕ್ಯವಲ್ಲ. ರಗಳೆಯು ಪ್ರಾಸದ ವಿಕಲ್ಪಗಳನ್ನು ಪ್ರಚೋದಿಸುತ್ತ, ೧೫ನೆಯ ಶತಮಾನದಾದಿಯಲ್ಲಿಯೇ ಯಾದವ ಕವಿಯ ಕೈಯಲ್ಲಿ ನಿರರ್ಗಳವಾಯಿತು. ಪ್ರಾಸರಾಹಿತ್ಯ, ಸರಳರಗಳೆ, Blank Verse, ಎಲ್ಲವೂ ಸಮಾನ ದರ್ಜೆಯ ಬದುಕುಗಳಲ್ಲ. ಪ್ರಾಸಬಿಟ್ಟ ರಗಳೆಯು Blank Verse ಆಗುವ ಗಡಿಬಿಡಿಯಲ್ಲಿ ಕೇವಲ ರಗಳೆಯೇ ಆಗಿದ್ದೂ ಉಂಟು. Verseಊ Blank ಆಗಿದ್ದೂ ಉಂಟು. ಪ್ರಾಸರಾಹಿತ್ಯದಲ್ಲಿ ಅದನ್ನಲ್ಲದೆ ಬೇರೆ ಏನೂ ಸಾಧಿಸದೆ ಇದ್ದವರೂ ಇದ್ದಾರೆ. ಪ್ರಾಸಸಾಹಿತ್ಯ, ಪ್ರಾಸರಾಹಿತ್ಯ ಇದು ಯಾವ ದೊಡ್ಡ ಸಿದ್ಧಿಯೂ ಎನಿಸಲಾರದು. ಪ್ರಾಸವು ಸ್ವಾಭಾವಿಕವಾಗಿ ಒಂದು ಶಬ್ದಾಲಂಕಾರ; ಕುಶಲ ಕವಿಯ ಕೈಯಲ್ಲಿ ಅದೇ ಧ್ವನಿಪೂರ್ಣವಾದ ಔಚಿತ್ಯದಿಂದ ಭಾವಾಲಂಕಾರವಾಗುವದು. ಪ್ರಾಸವನ್ನೂ ಬಿಟ್ಟ ನಿರಲಂಕಾರ ಸುಂದರ ಕವನ ಕಟ್ಟುವದು ಹೆಚ್ಚಿನ ಕುಶಲತೆಯೂ ಆಹುದು ಈ ಅರ್ಥದಲ್ಲಿ.

ಇನ್ನು ಉಳಿಯಿತು, ನನ್ನ ಮಿತ್ರರ ಕವನಗಳ ರಸಸ್ಥಾನನಿರೂಪಣೆ. ರಸವು ಮಹಾಪ್ರಬಂಧಗಳಲ್ಲಿ ಸಮ್ಯಕ್ ಸಿದ್ಧಿಯನ್ನು ಕಾಣುವದು;

ಭಾವಗೀತಗಳಲ್ಲಿ ಅವರ ಪ್ರಯೋಗವು ಲಾಕ್ಷಣಿಕವಾಗಿಯೇ ಬರುವ ದೆಂದು ತೋರುತ್ತದೆ. ಆದರೂ ಭಾವಗೀತಗಳು ಕವಿಜೀವನದ ಗೀತ ಗಳಾದಾಗ ಅವುಗಳಲ್ಲೊಂದು ನವರಸವು ತಲೆದೋರುವದು. ಅಂಥ ನವರಸ ಪರಿಪುಷ್ಟಿಗೂ ಕಾವ್ಯಸಂಗ್ರಹದ ಗಾತ್ರ ದೊಡ್ಡದಾಗಬೇಕು, ಇಲ್ಲವೆ. ಉತ್ಕಟತೆಯು ಹಿರಿದಾಗಬೇಕು. ಇವೆರಡನ್ನೂ ಕವಿಯು ಈ ಪ್ರಥಮ ಸಂಕಲನದಲ್ಲಿಯೇ ಅಪೇಕ್ಷಿಸುವದು ಅಪ್ರಾಸಂಗಿಕವಾದೀತು. 'ಸರ' ವು ಹೂವುಗಳ ಸರವೂ ಆಗಿದೆ, ನವೀನ ಸ್ವರವೂ ಆಗಿದೆ, ಕಾಮನ ಶರವೂ ಆಗಿದೆ, ನವಕೃತಿ ಕಮಲಗಳ ಸರೋವರವೂ ಆಗಿದೆ–ಕವಿಗಳೇ ನಾಂದಿಪದ್ಯದಲ್ಲಿ ಹೇಳಿದಂತೆ. ಹೀಗಿದ್ದಷ್ಟಕ್ಕೆ ಯಾವ ಸಹೃದಯ ವಿಮರ್ಶಕನೂ ಈ 'ಸರ' ದೊಳಗಿನ ಸುವರ್ಣಪುಷ್ಪಗಳನ್ನು ಚಿನಿವಾಲರ ಲೋಭದಿಂದ ಒರೆಗಲ್ಲಿಗೆ ತಿಕ್ಕಲಾರ; ಯಾವ ರಸಿಕರೂ ಆದನ್ನು ಅಪೇ ಕ್ಷಿಸಲಾರರು. 'ಸರ' ದಲ್ಲಿ ಐದು ಎಳೆಗಳಿವೆ. ಕವಿಯ ನಿಸರ್ಗಪ್ರೇಮ, ಜೀವನದ ವಿವಿಧ ಭಾವಗಳ ರುಚಿ, ಕೌಟುಂಬಿಕ ಪ್ರಣಯವಿಲಾಸ, ಸ್ವಜಾತೀಯರಾದ ಕವಿಗಳನ್ನು ಕುರಿತು ಆದರ ಅಭಿಮಾನ, ಮತ್ತು ಕೊನೆಗೆ ಕವಿಯ ಆತ್ಮಚರಿತ-ಹೀಗೆ ಪಂಚೀಕೃತವಾಗಿದೆ. ಶ್ರೀ. ಅಮ್ಮೆಂಬಳ ಶಂಕರ ನಾರಾಯಣರಾಯರ ಪ್ರಥಮ ಸಂಕಲನ ಕವನ ಪ್ರಪಂಚ. ಎಲ್ಲ ಕವನಗಳಲ್ಲಿಯೂ, ಕವಿಯ ಪ್ರಾಮಾಣಿಕತೆ, ಸಹಜತೆ, ಪ್ರಸಾದ, ಪ್ರಯತ್ನಗಳ ಲಕ್ಷಣವಿದೆ. ಅವರ ಚರಿತೆಯ ಅಂಗಗಳು ಅವರ ಬೆಳ ವಣಿಗೆಯನ್ನೂ ಸ್ಪಷ್ಟಪಡಿಸುತ್ತವೆ. ಅವರಲ್ಲಿ ಸಹಜಶಕ್ತಿಯಿದೆ, ವ್ಯುತ್ಪತ್ತಿ ಯನ್ನು ಬಹುಮುಖವಾಗಿ ಗಳಿಸುತ್ತಿದ್ದಾರೆ, ಕಾವ್ಯಸೇವೆ, ಕಾವ್ಯಾಭ್ಯಾಸ ನಿರಂತರವಾಗಿದೆ. ಇದರಿಂದ ಇವರ ಕವನಗಳಿಗೆ ಒಂದು ಸಹಜತೆಯ ಒಪ್ಪ ಬಂದಿದೆ. ನನಗೆ ವಿಶೇಷವಾಗಿ ಅವರ ಶೃಂಗಾರಾತ್ಮಕ ಕವನಗಳು ಪ್ರಿಯವಾಗಿ ತೋರಿದವು. ಅವರ ನಿಸರ್ಗಪ್ರೇಮವೂ ಪ್ರಾಮಾಣಿಕ ವಾಗಿದೆ. ಕವಿಗಳ ವಿಷಯದ ಷಟ್ಪದಿಗಳು ಅಷ್ಟು ಕಾಂತಿಯುತವಾಗಿಲ್ಲ. ಕವಿಗಳೆ ಹೇಳುವಂತೆ ಅವರ ಕವನದ ಶೈಲಿಯು ಶ್ರೀ. ಕು. ವೆಂ. ಪುಟ್ಟಪ್ಪ ನವರ 'ನವಿಲ' ನ್ನು ನೋಡಿ ಹುಟ್ಟಿದುದು. ಶ್ರೀ. ಅಮ್ಮೆಂಬಳ ಅವರ ಶೈಲಿಯಲ್ಲಿ ಬೆಡಗು ಕಡಿಮೆ ಇದ್ದರೂ ಬೇರೊಂದು ನಿರ್ಮಲತೆಯಿದೆ.

ಈ ಮೌಲಿಕ ಗುಣದ ಮೂಲಕವಾಗಿಯೇ ಶ್ರೀ. ಅಮ್ಮೆಂಬಳ ಅವರ ಈ ಶೈಲಿಯೇ ಪುಷ್ಟವಾಗಿ ಹೊಸ ಜೀವನದ ಹುದುವನ್ನು ಪಡೆದು ಕನ್ನಡಕ್ಕೆ ಉತ್ತಮ ಕವನಗಳನ್ನು ಕೊಡುವದೆಂದು ನಂಬಿದ್ದೇನೆ. ಅವರ ನಿರಾಡಂಬರದ ಪಾಂಡಿತ್ಯ, ಸೇವೆಯ ತೀವ್ರತೆ, ಸಹಜ ಪ್ರಸಾದ ಗುಣಗಳಿಗೆ ನಾನು ಆಕರ್ಷಿತನಾಗಿ, ಅವರ ಇತರ ಕೃತಿಗಳನ್ನೂ ಮೆಚ್ಚಿದ್ದೇನೆಂದು ತಿಳಿಸಿ ಈ ಮುನ್ನುಡಿಯನ್ನು ಮುಗಿಸುತ್ತೇನೆ.

೧೫–೮–೪೭ ದ. ರಾ. ಬೇಂದ್ರೆ

# ಕವಿ-ಕಾವ್ಯ ಪರಿಚಯ

## ಕವಿ

ಕಾಳಿದಾಸನ ಕುಮಾರಸಂಭವವನ್ನು ಸರಲವೂ ಸುಂದರವೂ ಆದ ಶೈಲಿಯಲ್ಲಿ ಕನ್ನಡಕ್ಕೆ ಅನುವಾದ ಮಾಡಿರುವ ಹಾಗೂ ಕಳೆದ ಹದಿಮೂರು ವರ್ಷಗಳಿಂದಲೂ ಕನ್ನಡದಲ್ಲಿ ಕವನ ಲೇಖನಗಳ ವ್ಯವಸಾಯವನ್ನು ಮಾಡುತ್ತಾ ಬಂದಿರುವ ಗೆಳೆಯ ಶ್ರೀ. ಅಮ್ಮೆಂಬಳ ಶಂಕರನಾರಾಯಣರು ಕನ್ನಡಿಗರಿಗೆ ಚೆನ್ನಾಗಿ ಪರಿಚಿತರೇ ಆಗಿದ್ದಾರೆ; ಕನ್ನಡದ ಹೆಸರಾಂತ ಕೆಲವು ಲೇಖಕರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ; ಕನ್ನಡ ವಾಚಕಲೋಕನ ಪ್ರೀತಿಯನ್ನು ಗಳಿಸಿದ್ದಾರೆ. ಅವರು ಇಂದು, ಈ 'ಸರ' ವನ್ನು—ತಮ್ಮ ಸುಂದರವಾದ ಕವನಗಳ ಈ ಸಂಗ್ರಹವನ್ನು—ಕನ್ನಡಿಗರ ಕೈಗೀವಲ್ಲಿ, ಈ ಕವಿಯ ಕುರಿತು, ಈ ಕೃತಿಯ ಕುರಿತು ನಾನು ಏನೆಂದು ಹೊಸತಾಗಿ ಪರಿಚಯ ಮಾಡಿಕೊಡಲಿ?

ಕನ್ನಡದಲ್ಲಿ ಹೊಸ ಸಾಹಿತ್ಯದ ನಿರ್ಮಾಣ ಕಾರ್ಯವು ಕಳೆದ ಕಾಲು ಶತಮಾನದಿಂದಲೂ ಒಳ್ಳೆಯ ಹುರುಪಿನಿಂದಲೇ ಆಗುತ್ತಾ ಇದೆ. ಮಂಗಳೂರು, ಬೆಂಗಳೂರು, ಧಾರವಾಡ, ಕಾರವಾರ—ಹೀಗೆ ಕನ್ನಡ ನಾಡಿನ ಎಲ್ಲಾ ಕೇಂದ್ರಗಳಲ್ಲಿಯೂ ಈ ಕೆಲಸವನ್ನು ಹಲವರು ಸಾಹಿತ್ಯ ಸೇವಕರು ನಡೆಸುತ್ತಾ ಬಂದಿದ್ದಾರೆ. ಕನ್ನಡದ ಈ ನವೋದಯ ಕಾಲದಲ್ಲಿ ಹಲವರು ಗಣ್ಯರಾದ ಕವಿಗಳು, ಕತೆಗಾರರು, ನಾಟಕಕಾರರು, ಲೇಖಕರು ಮುಂಬಂದು ದುಡಿದು ಹೆಸರುಗಳಿಸಿದ್ದಾರೆ. ಇಂತಹರಲ್ಲಿ ಗೆಳೆಯ ಶ್ರೀ. ಅಮ್ಮೆಂಬಳ ಶಂಕರನಾರಾಯಣರೂ ಒಬ್ಬರು.

## ಸರ

'ಸರ' ಎಂಬೀ ಕವನ ಸಂಗ್ರಹದಲ್ಲಿ ೧೯೩೪ರಿಂದ ತೊಡಗಿ ೧೯೪೬ರ ವರೆಗೆ—ಈ ಹದಿನೆರಡು ವರ್ಷಗಳಲ್ಲಿ—ಶ್ರೀ. ಅಮ್ಮೆಂಬಳ ಶಂಕರನಾರಾಯಣರು ಬರೆದ ಐವತ್ತೊಂದು ಕವನಗಳಿವೆ. ಈ 'ಸರ' ವು ಪ್ರಕೃತಿಪರ, ಭಾವಾತ್ಮಕ, ಶೃಂಗಾರಾತ್ಮಕ, ಕವಿಸ್ಮೃತಿ, ಜೀವನಸ್ಮೃತಿ

ಎಂಬೀ ಐದು ಎಳೆಗಳಿಂದ ಕೂಡಿದೆ. ಇಡೀ ಪುಸ್ತಕವನ್ನು ಹೀಗೆ ವಿಭಾಗಿಸಿ ಕೊಟ್ಟಿರುವುದರಿಂದ ಓದುಗರಿಗೆ,–ವಿಶೇಷತಃ ಆಧುನಿಕ ಕವನಗಳನ್ನು ಅಭ್ಯಾಸ ಮಾಡುವವರಿಗೆ–ತುಂಬಾ ನೆರವಾಗುವುದರಲ್ಲಿ ಸಂಶಯವಿಲ್ಲ.

## ಪ್ರಕೃತಿಪರ

ಇಡೀ ಸಂಗ್ರಹದ ಕುರಿತು ಸಾರಾಂಶರೂಪವಾಗಿ ಬರೆದ ಪದ್ಯ 'ಸರ.' 'ಅರುಣ'ದಲ್ಲಿ ನಾವು ಶಬ್ದಾಲಂಕಾರಗಳ ಚಮತ್ಕಾರವನ್ನೂ ಭಾವನೆಯ ಓಟವನ್ನೂ ನೋಡಬಹುದು. 'ಹಿಮಸಮಾಧಿ' ಸಂಸ್ಕೃತ ಶೈಲಿಯಲ್ಲಿದೆ. 'ಉಷೆ'ಯ ಕುರಿತು ಹಿಂದಿನ ಉಪನಿಷತ್ಕಾಲದ ಕವಿಗಳಂತೆ ಕಾವ್ಯಾವೇಶ ಉಕ್ಕಿ ಹಾಡಿದ್ದಾರೆ. 'ಎಳೆನೇಸರು' ಒಂದು ಚಲುವಾದ ವರ್ಣನೆ. 'ನಿಸರ್ಗ ಚಲಚ್ಚಿತ್ರ'ವನ್ನು ಕಾಣಲು ಕವಿಹೃದಯ ಬೇಕು. ಕಲ್ಲುಗಳೆಡೆಯಲ್ಲಿ ಹರಿಯುವ ತೊರೆಯ ಚೆಲುವನ್ನು ಕಂಡು ಕವಿ 'ಪ್ರಕೃತಿಯ ಮಡಿಲು' ಪದ್ಯ ಬರೆದಿದ್ದಾರೆ. 'ನಕ್ಷತ್ರಗಳು' ಕವಿಗಿರುವ ಛಂದಃಕೌಶಲ ಹಾಗೂ ಭಾಷಾಪ್ರಭುತ್ವವನ್ನು ತಿಳಿಸುತ್ತದೆ. 'ತಂಗದಿರ'ನೊಡನೆ ಕವಿಯು ಕಾಳಿಮೆಯಾಂತ ಕಾರಣವನ್ನು ಕೇಳುವುದು ಚಮತ್ಕಾರಿಕವಾಗಿದೆ. ನಕ್ಷತ್ರಲೋಕದ ವೈಚಿತ್ರ್ಯಕ್ಕೆ ಬೆರಗಾಗಿ ಕವಿಯು 'ತಾರಾಯಾಮಿನಿ'ಯನ್ನು ರೂಪಿಸಿದ್ದಾರೆ. ಬಾಹ್ಯ ಸೌಂದರ್ಯಕ್ಕೆ ಮಾತ್ರ ಮರುಳಾಗುವವರಿಗೆ 'ಕೋಗಿಲೆ' ಸರಿಯಾದ ಉತ್ತರ. 'ಅದೊಂದು ದಿನದಲ್ಲಿ' ಕವಿಯು ಪ್ರಕೃತಿಯ ಸೌಂದರ್ಯವನ್ನು ಅನುಭವಿಸಿದ್ದಾರೆ.

## ಭಾವಾತ್ಮಕ

'ಕವನ ಕಾಮಿನಿ' ಕವಿಯ ಸದ್ಯದ ಆಶೆ ಆಕಾಂಕ್ಷೆಗಳನ್ನು ಒಳಗೊಂಡಿದೆ. 'ಕನ್ನಡದ ವಿಶ್ವರೂಪ'ದಲ್ಲಿ ಅದೇ ಹಂಬಲು ಹೆಚ್ಚಿರುವುದು. 'ಪರಿಣಾಮ'ದಲ್ಲಿ ಜೀವನ ಪ್ರಕೃತಿಗಳ ವಿಮರ್ಶೆಯಿದೆ. 'ಕುಲಪತಿ' ಹಿಂದಿನ ಗುರುಕುಲಗಳ ನೆನಪು ಕೊಡುತ್ತದೆ. 'ಮಹಾತ್ಮಾಗಾಂಧಿಗಾಗಿ' ಕವಿಗಿರುವ ಭಕ್ತಿಗೌರವ ಸೂಚಕವಾಗಿರುವುದು. 'ಅನಂತ ಶೂನ್ಯ'

ಭಾವಕವನ. 'ಹಿಂದಿನ ಕಾಲದ ಒಂದು ಚಿತ್ರ'ವು ಕರುಳು ಕೊರೆಯುವ ಕರುಣೆಯ ಚಿತ್ರ! 'ವಿಶ್ವಸಾಗರದೂರ್ಮಿಯಲಿ' ಬಾಳದೋಣಿ ಹೇಗೆ ತೇಲುತ್ತಿದೆಯೆನ್ನುವುದು ಹೇಳಲಾಗಿದೆ. 'ಅಮ್ಮ' ಅಗಲಿದ ತಾಯಿ ನೆನಹು. 'ಎಲೆ ನೋವೆ!' ಕವನದಲ್ಲಿ ಕವಿಯು ಕಷ್ಟವನ್ನು ಸುಖವಾಗಿ ಪರಿಗಣಿಸಲು ಉಪದೇಶಿಸಿದ್ದಾರೆ. ಪ್ರಕೃತಿ ನಿಯಮವನ್ನೆ ಕವಿಯು 'ವಿಧಿ'ಯೆಂದು ಸಾರುವಂತಿದೆ. 'ಕಗ್ಗಲ್ಲ ಕಾವ್ಯ' ಕಾರ್ಕಳದ ಶಿಲಾ ಮೂರ್ತಿ, ಗೋಮಟೇಶ್ವರನ ಕುರಿತು. 'ವಿಜಯನಗರವೆ' ಷಟ್‌ಶತ ಸಾವಂತ್ಸರಿಕೋತ್ಸವದ ನೆನಪು. ಸುಖದುಃಖೇ ಸಮೇ ಕೃತ್ವಾ ಎಂಬ ಗೀತಾರ್ಥವು 'ದ್ವಂದ್ವ'ದಲ್ಲಿದೆ. 'ಮೋಹನ ಮುರಲಿ' ಕೃಷ್ಣ ಗೋಪಿಯರ ಲಾಸ್ಯಲಹರಿಯಿಂದ ಕೂಡಿದೆ. ಆಧುನಿಕ ಕಾಲದ ಪತ್ರಿಕೆಗಳ ವಿವರಣೆ 'ಪತ್ರಿಕೆ.' 'ಕುಚೇಲ' ಸರಲವಾದ ಭಾಮಿನಿ ಷಟ್ಪದಿಯಿಂದ ರಮ್ಯವಾಗಿದೆ. 'ಸರಸತಿ' ಯನ್ನೋದುವಾಗ ರವಿವರ್ಮನ ಚಿತ್ರದ ನೆನಪಾಗುವುದು. 'ಉಮರ ಸಂದೇಶ' ಶ್ರೀ. ಗುಂಡಪ್ಪನವರ ಕಾವ್ಯದ ಸ್ಫೂರ್ತಿ. 'ಕೊಳಲ ಕೃಷ್ಣ'ದಲ್ಲಿ ಶ್ರೀಕೃಷ್ಣನ ಮೇಲೆ ಕವಿಗಿರುವ ಭಕ್ತಿ ಪುನಃ ಪ್ರಕಟವಾಗಿದೆ. 'ಇವನಾರೆ?' ಎಂಬುದೂ ಶ್ರೀಕೃಷ್ಣನ ಕುರಿತು. 'ವಿಶ್ವಶಾಂತಿ' ಆಗಬೇಕೆನ್ನುವುದು ದ್ವಿತೀಯ ಮಹಾಯುದ್ಧದ ಭೀಕರ ಮಾರಣಕೃತ್ಯವನ್ನು ಕಂಡು ನೊಂದ ಕವಿಹೃದಯ.

## ಶೃಂಗಾರಾತ್ಮಕ

'ಪ್ರೇಮಾಂಜಲಿ' ಶ್ರೀಕೃಷ್ಣನಿಗೆ ಗೋಪಿಯರರ್ಪಿಸಿದುದು. 'ಕಿಶೋರಿ' ಮದುವೆಯ ಮೊದಲ ನೋಟ. 'ನನ್ನಾಕೆ' ಮದುವೆಯಾದ ಹೊಸದರ ಭಾವನೆ. ತಾಯಮನೆಗೆ ಹೋದಾಗ 'ನಲ್ಲೆಯ ನೆನಪು' ಆಗದೆ ಇದ್ದೀತೆ? ಹಾಗೆ ನೆನೆಯುತ್ತಿದ್ದ ಕವಿ, ತಾಯ ಮನೆಯಿಂದ ಹೆಂಡತಿ ಬರುವ ದಿನ 'ಇಂದು ಬರುವಳು ನನ್ನ ಮನದನ್ನೆ' ಎಂದು ಹಿಗ್ಗುತ್ತಾರೆ. ಪ್ರಣಯದಲ್ಲಿ ಮುನಿಸೂ ಚೆಂದ; ಆದಾಗಿ 'ಕೋಪವೇತಕೆ ಮಾನಿನಿ' ಎಂದು ಕವಿಯು ಪ್ರಶ್ನಿಸುತ್ತಾರೆ. ತನಗೆ ಸಾಕಷ್ಟು ಆಭರಣ ಗಳನ್ನು ತೊಡಿಸದಿರುವ ಕಾರಣ, 'ಸುಖವಿಲ್ಲ' ಎಂದು ಹೆಂಡತಿ ಹೇಳಿ

ದರೆ ಕವಿಯಾದ ಗಂಡನು ಭಾವಲಹರಿಯಲಿ 'ಸುಖವುಂಟು' ಎಂದು ಪತ್ನಿಯನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಾರೆ.

## ಕವಿಸ್ಮೃತಿ

'ಪಂಪ', 'ರನ್ನ', 'ಕುಮಾರವ್ಯಾಸ', 'ರತ್ನಾಕರ ಕವಿ'. 'ಮಹಾದೇವಿಯಕ್ಕ', 'ಲಕ್ಷ್ಮೀಶ', 'ಕವೀಂದ್ರ ರವೀಂದ್ರ'. 'ಅಂಬಿಕಾತನಯದತ್ತ' ಇವೆಲ್ಲಾ ಕವಿವರರ ಕುರಿತು ಬರೆದ ಸ್ತುತಿಗೀತಗಳು; ಸುಂದರವಾದ ಚತುರ್ದಶಪದಿಗಳು.

## ಜೀವನಸ್ಮೃತಿ

ಕೊನೆಯ ಕವನ 'ನನ್ನ ಜೀವನದಲ್ಲಿ' ಎಂಬುದು. ೧೯೧೬ ರಿಂದ ೧೯೪೫ರ ವರೆಗಿನ ಕವಿಜೀವನೇತಿಹಾಸದ ಸಿಂಹಾವಲೋಕನ. ಶೈಲಿ ತುಸು ಗದ್ಯಮಯವಾಯಿತೆಂದೂ, ಕಥನಕ್ರಮ ಸ್ವಲ್ಪ ವಾಚ್ಯವಾಯಿತೆಂದೂ ಅನಿಸಬಹುದಾದರೂ ಈ ಕವನವು ಕವಿಯ ನಿತ್ಯ ಜೀವನದಂತೆ ಸರಲವೂ ಸಹಜವೂ ಆಗಿದೆ.

## ಉಪಸಂಹೃತಿ

ಇಂತು, ಶ್ರೀ. ಅಮ್ಮೆಂಬಳ ಶಂಕರನಾರಾಯಣರು ಸೌಸವದ ಸುಮಗಳಿಂದ ಕೂಡಿದ ಈ ಸರವನ್ನು ಕನ್ನಡ ಸಾಹಿತ್ಯಶಾರದೆಯ ಕೊರಳಿಗೆ ಅರ್ಪಿಸಿದ್ದಾರೆ. ವಿವಿಧ ರಾಗಗಳಿಂದ ಕೂಡಿದ ಅವರ ಇನಿದಾದ ಈ ಸರವು ರಸಿಕ ಕನ್ನಡಿಗರ ಹೃದಯಗಳಲ್ಲಿ ಇಂಚರವನ್ನುಂಟು ಮಾಡದಿರದು. ಕವಿಗಳದೇ ಒಂದು ಪದ್ಯವನ್ನು ಇಲ್ಲಿ ಉದ್ಧರಿಸಿ ನಾನೀ ಪರಿಚಯವನ್ನು ಪೂರ್ತಿಗೊಳಿಸುತ್ತೇನೆ:

**'ಕೋಗಿಲೆ ಕುರೂಪಿಯೆನೆ, ರಾಗದಲಿ ಹಾಡುತಿಹ**
**ಮಧುರ ಸಂಗೀತವಶ್ರಾವ್ಯವಹುದೇನು ?**
**ಭಾವರಸ ಜಿರೆದಿರುವ ಕೋಗಿಲೆಯ ಸವಿಸರವ**
**ಕೇಳೆನೆಂದಾರಾದರೊರೆಯುತಿಹರೇನು ?'**

ಪೆರಡಾಲ
೧೪-೭-೧೯೪೭

**—ಕಯ್ಯಾರ ಕಿಞ್ಞಣ್ಣರೈ**

# ಹೇಳಿಕೆ

ನನ್ನ 'ಕನ್ನಡ ಕುಮಾರಸಂಭವ'ದ ಪ್ರಥಮ ಭಾಗವು ಇತ್ತೀಚೆಗೆ ಪ್ರಕಟವಾದುದರಿಂದ, ಅನುಪೂರ್ವಿಯ ದೃಷ್ಟಿಯಲ್ಲಿ ಈ 'ಸರ'ವು ದ್ವಿತೀಯ ಪುಸ್ತಕವಾದರೂ, ಮೊತ್ತಮೊದಲು ಬರೆದ ಕವನಗಳು ಇದರಲ್ಲಿ ಬೆಳಕು ಕಾಣುವ ಕಾರಣದಿಂದಲೂ, ಇದನ್ನು ಆಯ್ದು ನೇಯ್ದು ಕೈಬರೆಹದಲ್ಲಿ ಪುಸ್ತಕ ರೂಪವಾಗಿ ರೂಪಿಸಿದ ಸಮಯದ ದೃಷ್ಟಿಯಿಂದಲೂ ಇದು ನನ್ನ ಮೊದಲ ಕೃತಿಯಾಗಿದೆ.

ಇದರಲ್ಲಿ ಆದಿಯ ಅಂತ್ಯದ ಎರಡು ಕವನಗಳನ್ನು ಬಿಟ್ಟರೆ, ಉಳಿದ ನಲುವತ್ತೊಂಬತ್ತು ಕವಿತೆಗಳೂ ಕೂಡ ಸಮಸಾಮಯಿಕ ಪತ್ರಿಕೆಗಳಲ್ಲಿ ಆಗಾಗ ಮುಖ ತೋರಿವೆ. ಇವುಗಳನ್ನು ಪ್ರಕಟಿಸಿದ ಜಯಕರ್ನಾಟಕ-ತ್ರಿವೇಣಿ–ವೀರವಾಣಿ–ಪೌರವಾಣಿ–ಜೀವನ–ಧುರೀಣ-ಬಡವರಬಂಧು-ರಾಷ್ಟ್ರಬಂಧು–ಜಯಂತಿ–ಸ್ವದೇಶಾಭಿಮಾನಿ--ಅಂತರಂಗ--ನವಯುಗ–ನವಭಾರತ–ಪ್ರಜಾಮತ–ಪ್ರಭಾತ–ಶ್ರೀಕೃಷ್ಣಸಂದೇಶ–ಉಷಾ–ಕನ್ನಡನಾಡಿ–ವಾಹಿನಿ–ಬಾಲಚಂದ್ರ–ಕಲಾಚಂದ್ರ ಮೊದಲಾದ ಪತ್ರಿಕೆಗಳ ಸಂಪಾದಕರಿಗೆ ವಂದನೆಗಳು. ಇವುಗಳಲ್ಲಿ ಹೆಚ್ಚಿನವು ವಿಶೇಷಸಂಚಿಕೆಗಳಲ್ಲಿ ಪ್ರಕಟವಾದುವು. ಹೀಗೆಯೇ 'ನಮ್ಮ ಕವಿತೆಗಳು' (ಮಿತ್ರಮಂಡಲಿ)—'ಕನ್ನಡ ಪಾಠಮಾಲೆ'—'ಕವಿ ಅಂಬಿಕಾತನಯದತ್ತ' ಮೊದಲಾದ ಸಂಕಲನ ಗ್ರಂಥಗಳಲ್ಲಿಯೂ ಕೆಲವು ಕವನಗಳು ಸ್ಥಾನ ಪಡೆವುದಕ್ಕೆ ಅವನ್ನು ಆಯ್ದವರಿಗೂ ಪ್ರಣಾಮಗಳು.

ಇದಕ್ಕೆ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಬರೆದಿತ್ತ ಆಧುನಿಕ ಕವಿಸಮ್ರಾಟರಾದ ಶ್ರೀ. ದ. ರಾ. ಬೇಂದ್ರೆಯವರಿಗೂ, ಕೆಲವೇ ಮಾತುಗಳಲ್ಲಿ ಕವಿ–ಕಾವ್ಯ ಪರಿಚಯವನ್ನು ಸರಸ–ಸರಳವಾಗಿ ಬರೆದುಕೊಟ್ಟ ನನ್ನ ಅಂತರಂಗಿಕ ಗೆಳೆಯರಾದ 'ಶ್ರೀಮುಖ'ದ ಕವಿ 'ದುರ್ಗಾದಾಸ'ರಿಗೂ ಬಹಳ ಕೃತಜ್ಞನಾಗಿರುವೆನು. ಇಬ್ಬರಿಗೂ ಸಾದರ ಅಭಿವಂದನೆಗಳು.

ಈ ಪುಸ್ತಕವು ಪ್ರಕಟವಾಗಲು ವಿಶೇಷವಾಗಿ ಶ್ರಮಿಸಿ ನೆರವಿತ್ತ ಹತ್ತಿರದ ಗೆಳೆಯರಾದ ಶ್ರೀ. ಕುಳುಕುಂದ ಶಿವರಾಯರಿಗೂ, ಅವ್ಯಾಜ ಪ್ರೀತಿಯಿಂದ ಮುದ್ರಿಸಿ ಪ್ರಕಟಿಸುವ ಭಾರಹೊತ್ತ ಶ್ರೀ. ಕುಲಕರ್ಣಿ ಶೇಷಗಿರಿರಾಯರಿಗೂ ಶತಶಃ ಧನ್ಯವಾದಗಳೊಂದಿಗೆ ಸಪ್ರೇಮ ವಂದನೆಗಳು.

ಮಂಗಳಾ ದೇವಸ್ಥಾನ
ಮಂಗಳೂರು
೧೦-೮-೧೯೪೭

ತಮ್ಮ
**ಅಮ್ಮೆಂಬಳ ಶಂಕರನಾರಾಣಯ**

## ಅರ್ಪಣೆ

ನನ್ನ ಏಳನೇ ವರ್ಷದಲ್ಲಿ ಅಗಲಿದ

ಪೂಜ್ಯ ಮಾತೃಶ್ರೀ

**ಕಾವೇರಿಯಮ್ಮನಿಗೆ-**

ನನ್ನ ಮೊದಲ ಹೊತ್ತಿಗೆ

ಅಮ್ಮ! ನಿನ್ನ ನೆನಪಿಗೆ.

—"ಶಂ"

ಮಿಸುನಿಯದೊಂದಾದೊಡದೇಂ
ಪೊಸದೊಡವೆನಿಸುತ್ತೆ ಬೇರೆ ಬೇರೆನಿಸುವ ವೋಲ್ ।
ರಸವತ್ಕವಿತಾಮಾರ್ಗಂ
ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ ॥

—ಷಡಕ್ಷರಿ.

# ಸರ

೧

ಆಗೊಮ್ಮೆ ಈಗೊಮ್ಮೆ ಬಿರಿದರಳಿ ಸೊಗಯಿಸಿದ
ಸೌಸವದ ಸುಮಗಳನ್ನೊಲಿದಾಯ್ದು, ಸರಿ ನೆಯ್ದು,
ಸಾಹಿತ್ಯ ಶಾರದೆಯ ಕೊರಳಿಂಗೆ ಕಲೆಗೊಳಿಸಿ
ತೊಡಿಸಿರುವೆ ಚೆಲುವಿಲ್ಲದಲರುಗಳನುಳಿದ ಸರ

೨

ಹೃದಯಾಂತರಾಳದಲಿ ಭಾವಗಳ ಘರ್ಷಣೆಯು
ಸಂಸ್ಫೂರ್ತಿವಡೆದಾಗ ಚೆಲ್ಲಿ ಹರಿದೊಗೆದಿರುವ
ನಲ್ಗವಿತೆಯೋಳಿಗಳು ವಿವಿಧ ವಿಧ ರಾಗದಲಿ
ರಸಿಕರಿಗೆ ಕಿವಿದೆರೆಗೆ ಕೇಳಿಸಲಿ ಇನಿದು ಸರ

೩

ಬಗೆ ಬಗೆಯ ಭಾವಗಳ ಬತ್ತಳಿಕೆಯಿಂದೊಗೆದು,
ಅಲರಂಬನುರುತರದ ಸುಮಬಾಣಸಾಮ್ಯವ–
ನ್ನಾಂತು ಸಂತತ ಹೃದ್ಯರೆದೆಯನಿರ್ಕುಳಿಗೊಂಡು,
ಸಮ್ಮೋಹಕತೆಯನೊಳಗೊಳ್ಳಲೀ ಕೂರ್ ಸರಂ

೪

ಮಿತ್ರನುದಯಾವಸರ ಪರಿಸರಂಗೊಂಡಿರಲ್
ಅರವಿಂದ ವೃಂದದೊಳಗುತ್ಕ್ರಾಂತಿ ಮಸಗುಹುದು
ಕೆಲವು ಅರೆವಿರಿದಿರಲ್, ಕೆಲವು ಬಿರಿದರಳಿರಲ್
ಬಹುದು. ಸೌಭಾಗ್ಯವನೊಪ್ಪುಗೊಂಡಿರ್ಪುದೀ ಸರಂ

೧೯೪೦

# ಅರುಣ

೧

ನಸುಗೆಂಪಿನ
ತುಸು ಹಳದಿಯ
ಸಮ್ಮಿಶ್ರಣದೆಸಕ
ಚೆಲುವಾಗಿರೆ,
ಹೊಳೆಯುತಲಿರೆ,
ಅದೆಯರುಣನ ಗಮಕ

೨

ಕೆಂಬರಲನು
ಅಂಬರದಲಿ
ತುಂಬಿದ ತೆರ ನೋಟ;
ಕುಂಕುಮ ರಸ–
ವಂಕಿತವಹ
ವರ ಪಾಟಲ ಮುಕುಟ

೩

ಚೆಂದಳಿರನು
ನೆಯ್ದುದರನು
ತೊಟ್ಟಿಹ ಸುವಿಲಾಸ;
ಕೆಮ್ಮೀಸೆಯ
ಹುಮ್ಮಸವನು
ಇಮ್ಮಡಿಸುವ ಹಾಸ

೪

ರಕ್ತಾಂಬರ
ಸಕ್ತೋದರ
ಕಿರಣದ ಪರಿಪಾಟಿ;
ಕೆಂದಳದಲಿ
ಬಿಗಿವಿಡಿದಿಹ
ಹವಳದ ಚೆಲು 'ಚಾಟಿ'

೫

ಇಂತೊಪ್ಪಿರೆ
ಸಂತಸದಲಿ
ಮೂಡಣದಲಿ ಅರುಣ
ಮೂಡುತ, ದೆಸೆ-
ಗೀಡಾಡಿದ
ನವ ಕುಂಕುಮ ಕಿರಣ

೬

ಹಕ್ಕಿಯು ಕೊರ-
ಲಿಂಚರ ಹೊರ
ಹೊರಡಿಸಿ ಹಾಡುವನು
ಮಕ್ಕಳ ಮಾ-
ತಾಡಿಸಿ, ತಾ-
ನುರೆ ತೊದಲಾಡುವನು

೭

ಸಿಂಗಾರದ
ತಂಗಾಳಿಯು
ತೀಡಿಸಿ, ಸುಯ್ಯುವನು
ಕಿರು ಮುಗುಳನು
ಅರಳಾಗಿಸಿ,
ನಗಿಸುತ ನಗುತಿಹನು

೮

ನಿದ್ದೆಯ ಪರೆ
ಕೀಳುತಲರೆ-
ದೆರೆದಿಹ ಕಣ್ಣುಗಳ
ಬಿರಿದರಳಿಸಿ,
ಎಬ್ಬಿಸುವನು
ನಾಡಿನ ಜನರುಗಳ

೯

ಹೊಸ ಹುರುಪನು
ಹೊಸೆಯಿಸುವನು
ಬೀರುತ ಚೈತನ್ಯ;
ಉಪಹಾಸದಿ
ಅಪಹರಿಸುವ
ಜಡತೆಯ ಮಾಲಿನ್ಯ

೧೦

'ಅಜ್ಞಾನದ
ಅಂಧತೆಯನು
ಭೇದಿಸಿ ನೇಸರಿದೋ-
ಬೆಳಕಿನ ಬೆಳೆ
ತಿಳಿವಿನ ಹೊಳೆ
ಹೊಮ್ಮಿಸಿ ಬರುವನಿದೋ!'

೧೧

ಎಂಬಾ ನುಡಿ
ನಂಬಿಸಿಯುಡಿ-
ಯಿಡುವನು ಮುಂದರುಣ;
ಆ ನಿಮಿಷದಿ
ರವಿಯುದಿಸುತ
ಸುರಿವನು ಸುಜ್ಞಾನ!

೧೯೩೫

# ಹಿಮ ಸಮಾಧಿ

ಹೇಮಂತ ಋತುಯೋಗಿ ಮೌನದಲಿ ಘನ-ಸಾಂದ್ರ
ಹಿಮ ಸಮಾಧಿ ಸ್ಥಿತಿಯೊಳೊಪ್ಪಿಹನು; ನಿಶ್ಚಿಂತ
ನಿಶ್ಚಲ ಧ್ಯಾನ ಸನ್ಮುದ್ರೆಯಲಿ ತಪವಾಂತ
ಯತಿಯ ರೀತಿಯನೋತು ನಿಂತಿಹನು! ಹಿಮ ರುಂದ್ರ

ಭಾವದಲಿ ಸಕಲ ಭೂಮಿ-ವ್ಯೋಮ ಕರಗಿಹುದು
ಬೂದು ಬಣ್ಣದ ಲೀಲೆಯಲಿ ವ್ಯಾಪ್ತವಾಗಿರುವ
ಸಾಮಸ್ತ್ಯ ಸೂತ್ರದಲಿ ನಿಸ್ಯೂತವೀ ವಿಶ್ವ.
ಪ್ರಾಣಿ ಸಂತತಿಯೆಲ್ಲ ಕುಳಿರ ಕಡಲಿನೊಳಾಳ್ದು.

ಭೂತದಾವೇಶವಂತಂತೆ 'ಗಡಗಡ' ನಡುಗಿ,
ಬೆಕ್ಕಸಂ ಬಡುತಿಹುದು— ಇದನಾವುದನು ಕೂಡ
ಗಣಿಸದಿಹ ಹಿಮಪುರುಷನಿರವಿನದ್ಭುತ ನೋಡ-
ಅವ್ಯಕ್ತ ಶಕ್ತಿಯಿಂ ವ್ಯೋಮ ವಕ್ಷವನುಡುಗಿ,
ಗಿರಿ–ಶೃಂಗ–ಕಾಂತಾರ–ಭೂಮಿಗಳನಾವರಿಸಿ.
ನಿಂತಿಹನು ವರ ವಿರಾಡಾಕಾರವನು ವಹಿಸಿ,

# ಉಷೆ

೧

ಮೂಡಣ ಬಾನಿನ ಕರೆ ನಗಲು,
ಕತ್ತಲೆ ಮೊತ್ತವೆ ಪರಿದುಗಲು,
ಉಷೆರಮೆ ನಿಶೆರಮೆಯನು ಜಯಿಸಿ
ಮುಂದಕೆ ಬಂದಳು ಭವಿ ಹರಿಸಿ !

೨

ಕತ್ತಲೆ ಕಡಲಲಿ ತಿರೆ ಮುಳುಗಿ,
ನಿಶ್ಚೇಷ್ಟಿತವಾಗಿರಲುಡುಗಿ,
ಬೆಳಕಿನ ತಿಳಿವನು ಕರುಣಿಸುತ
ಎಬ್ಬಿಸುತಿರುವಳು ನಸುನಗುತ !

೩

ಹೊಸದಾಗರಳಿದ ತಾವರೆವೋಲ್
'ಲಕ-ಲಕ' ಹೊಳೆವಳು ಉಷೆಯಿವಳು.
ಮಗುವಿನ ನಿರ್ವ್ಯಾಜ ಸ್ಮಿತವೋಲ್
'ಕಿಲ-ಕಿಲ' ನಗುವಳು, ನಲಿಯುವಳು

೪

ಈ ವರೆಗಾದರೆ ತೆರೆದಿರುವ
ಚುಕ್ಕಿಗಳಾಲಿಯು ನಭವಧುವ
ಕಣ್ಣವೆ ಕೀಲಿಸಿ, ಕರಿಹೊದಿಕೆ
ತೆಗೆಯುತ ಕೊಟ್ಟಳು ಬಿಳಿರಪಕೆ.

೫

ಅರುಣನ ರೌದ್ರದ ರಕ್ತತೆಯು,
ಸೂರ್ಯನ ಸೋಜ್ವಲ ಪ್ರಖರತೆಯು,
ಉಷೆಯಲಿ ಬೆಸೆಯದು; ಶಾಂತತೆಯು
ಮಾರ್ದವವೆಸೆವುದು ಸೌಮ್ಯತೆಯು !

೬

ಅರುಣನ ಭಗಿನಿಯು ಉಷೆ ತರುಣಿ,
ನೇಸರ ಮಾತೆಯು ಉಷೆ ರಮಣಿ,
ಮಗನನು ಪಡೆಯುತ, 'ಈ ಜಗದ
ಸೇವೆಯನೆಸಗೆಂ' ದಾದರದ
ಹರಕೆಯನರುಹುತ, ತಾಯ್ತನದ
ತನ್ನಧಿಕಾರದಿ ನೆರೆವ ಮುದ.

೭

ಎಂದೋ ಹಿಂದಿನ ಕಾಲದಲಿ,
ಜಗದಲಿ ಜೀವಿಯ ಶೂನ್ಯದಲಿ,
ಅಂಧ ತಮಸ್ಸಿನ ಸಮಯದಲಿ,
ಪೊಡವಿಗೆ ಸರ್ವ ಪ್ರಥಮದಲಿ,
ಬೆಳಕಿನ ಅನುಭವವಾರಿಂದ ?
ಉಷೆವೆಳಗಿನ ಕಿರುಗೆರೆಯಿಂದ !

೮

ಅಂದಿಂದೀವರೆಗಾ ಉಷೆಯು
ನಿತ್ಯ ಸನಾತನೆಯಾಗಿಹಳು !

೧೯೩೭

# ಎಳೆನೇಸರು

## ೧

ಭೂಮಿಯಲ್ಲಿ ಹಿಮದ ಮುತ್ತು ಅರೆಗಣ್ಣ ತೆರದಿತ್ತು
ರವಿ ನೋಡಿ ಮೇಲ್ಬಂದು ಇರ್ಗಳಿಗೆ ಸಂದಿತ್ತು

ಮುಚ್ಚಿದ್ದ ಬೆಳ್ಮಂಜು ತೆರೆಯುಗಿದ ತೆರಸಿತ್ತು
ಹೆಚ್ಚಿದ್ದ ಕುಳಿರೂರತೆ ಕಾವಿಂಗೆ ಬಾಗಿತ್ತು

ನೇಸರಿನ ಎಳೆಗದಿರು ಹಿಮ ಮಣಿಯ ಮಾಲೆಯನು
ನೇಯ್ದು, ನಲಿಯುತಲಿತ್ತು ರಂಗಣಂಗುಣಿತಪನು

ದಿನಕರನ ಸಂಖ್ಯಾತ ಕಿರಣಗಳು ಪೂರ್ವದಿಂ
ಸುಸ್ಪಷ್ಟತೆಯನಾಂತು, ವಿವಿಧ ವಿಧ ವರ್ಣದಿಂ—

ಹರಿತಂಪು; ಮೋದದಿಂ ತಿರೆವೆಣ್ಣನಪ್ಪುತ್ತ,
ಮೃದುಚುಂಬನವನಿತ್ತು ಪುಲಕವನ್ನಾಗಿಸುತ,—

ಮಿರುಗಿರೆ, 'ಸಹಸ್ರಕರ' ನೆಂಬ ಸಂಕುಚಿತಾಖ್ಯೆ
ಮಿಥ್ಯವಾಗಲಸಂಖ್ಯಕರನೆಂಬ ಸವ್ಯಾಖ್ಯೆ—

ಸಮನಿಸಿದ ತೆರನಾಯ್ತು ! ಹೂಬಿಸಿಲು ಹೂಗಳಿಗೆ
ಎಸಳೆವೆಯನಲರಿಸಲು, ಹಿಮಬಂದು ಜೇನ್‌ಪಸಿಗೆ—

ಬೆರೆದೊಂದು ಗೂಡುತ್ತ, ತುಂಬಿಗಳಿಗಾಹ್ವಾನ-
ವೀಯಲವು ಬಂದೊಲಿದು ಮಾಡಿದುವು ಮಧುಪಾನ,

ಸೌಸವದ ತನಿಜೇನನೊಲಿದೀಂಟಿ, ಸೊಕ್ಕೇರಿ,
ಅಳಿಗಳೊಂದೇ ಸರದಿ ಸೂಸಿದುವು ಹಾಡ ಸರಿ.

ಹಕ್ಕಿಗಳ ಕೊರಲುಲಿಯು ಕಟ್ಟೊಡೆದು, ಹೊನಲಾಗಿ,
ಬಾನ ದನಿಯಲೆಯಿಂದ ದುಂದುಮಿಸಿತಿಂಪಾಗಿ

೨

ಬಯಲಿನೊಂದರೆಯಲ್ಲಿ ನಾನಾಗ ನಿಂದಿರಲು,
ಮೂಡಣದ ಬಾನ್ ಚೆಲುವು ಚಿಲುಮೆಯಲಿ ಚಿಮ್ಮಿರಲು,—

ಬಾಲಾರ್ಕನಿದಿರಾಗಿ ನನ್ನ ಕಣ್ಣೆವೆಗಳನು
ಅರಳಿಸುತ, ಮುಗುಳಿಸುತ, ನನ್ನೆಲ್ಲ ದೇಹವನು—

ಎಳೆಬಿಸಿಲ ಮಳೆಯಿಂದ ತೋಯಿಸುತ, ಸ್ವರ್ಗೀಯ
ಸಂತೋಷ ಸಾಗರದಿ ತೇಲಿಸುತಲಾತ್ಮೀಯ—

ಭಾವವನು ಬೆಳಗಿಸುತ, ಮುಗಿಲೋಳಿಗಳ ಮೇಲೆ
ಇರುವೆನವಡಿಗೆಯ ನಡೆದು, ಬರುತಿದ್ದ ವೇಳ್ಯೇಲಿ!

ಗಿಡ-ಬಳ್ಳಿಯೆಲೆಗಳಲಿ ನೆಯ್ದಿರುವ ಜೇಡ ಬಲೆ
ನೂಲಿನೆಳೆಗಳು ಚಿನ್ನಸರಿಗೆಯಂತಿಹವು ಸಲೆ.

ಭೂದೇವಿಯುಟ್ಟಿರುವ ಹಸುರುಡಿಗೆಯಂತೆಸೆವ
ಎಳೆಗಳನೆ ಮುಡಿಗಳಿಗೆ ಹೊಂಬಣ್ಣ ರಪಿಯೀವ.

ಎತ್ತೆತ್ತಲೂ ತಿರೆಯು ಹೊನ್ನ ಹೊಳೆಯಲಿ ತೇಲಿ,
ತನ್ನತನವನು ಮರೆತು, ಹರಿದು ಸೊಗಗಡಲಿನಲಿ—

ಸಂಗಮಂಗೊಂಡಂತೆ ಭಾಸವಾಗುತಲಿತ್ತು.
ಒಂದಿನಿತು ಚಣ ಕಳೆಯಲೊಪ್ಪನೇ ಬೇರಾಯ್ತು:—

ಸ್ವರ್ಣ ಲೇಪದ ಮೇಲೆ ರಜತ ರಸ ಬೆರೆದಂತೆ,
ಬಿಸಿಲೊಸರು ಕಣ್ಕಟ್ಟನಸ್ನಾಡಿಸಿತು ಮುಂತೆ!

# ನಿಸರ್ಗ-ಚಲಚ್ಚಿತ್ರ

ನಿತ್ಯವೂ ವಿಶ್ವರಂಗದ ಪ್ರಕೃತಿ ಮಂಟಪದಿ
ವಿಧ ವಿಧ ಚಲಚ್ಚಿತ್ರಗಳು ಭವ್ಯಭಾವಗಳ-
ನೊಳಗೊಂಡು, ನಿಯತ ನವ್ಯತೆಯನ್ನು ಬೀರುತ್ತ,
ನಿಷ್ಕಾಮ-ನಿಸ್ವಾರ್ಥ ದೃಷ್ಟಿಯಲಿ ದರ್ಶಿತಗ-
ಳಾಗಿ ಮೆರೆಯುತ್ತಿಹವು.

ವಿಶ್ವ ಪುರುಷನೆ ಚಿತ್ರ-
ನಿರ್ದೇಶಕನು. ವಿವಿಧ ವಿಹಗ ತತಿಗಳ ಗಾನ
ಲಹರಿಯೇ ಸಂಗೀತ ಮಾಧುರ್ಯ,

ಕಣ್ಣೆದಿರ
ಉಷೆನಾರಿ, ನದಿನೀರೆ, ಯಾಮಿನೀ ಕಾಮಿನೀ,
ಬನವೆಣ್ಣು, ಸಂಧ್ಯಾವಧೂ — ಆದಿ ಪ್ರಖ್ಯಾತ
ನಟಿಗಳೇ, ನಭದೊಳಿಹ ಪ್ರತ್ಯಕ್ಷ ತಾರೆಗಳೆ
ಹೆಸರಾಂತ 'ತಾರೆ' ಗಳು.

ಅರುಣ, ದಿನಕರ, ಚಂದ್ರ,
ಸಾಗರ, ವಸಂತಾದಿ ನಟವರೇಣ್ಯರು ನಟಿಪ-
ರೀ ವಿಲಕ್ಷಣ-ನಿತ್ಯ-ನೂತನ- ಯಥಾರ್ಥವಹ
ವರ ಚಲಚ್ಚಿತ್ರ ಪ್ರದರ್ಶನದಿ !

ಆದರಿದ-
ರತಿಶಯಿತ ಸೌಂದರ್ಯ ದರ್ಶನಾನುಭವಕ್ಕೆ
ಬಾಹ್ಯ ಚಕ್ಷುಗಳಿಂದಲೂ ಕೂಡ, ಆಂತರಿಕ
ಜ್ಞಾನ ದೃಷ್ಟಿಯ ನೋಟವತ್ಯಧಿಕ ಸಹಕಾರಿ !

೧೯೩೯

# ಪ್ರಕೃತಿಯ ಮಡಿಲು

೧

ಸುತ್ತಲು ಕಲ್ಲು !
ಸುತ್ತಿದೆ ಹುಲ್ಲು !!
ಕಲ್ಲುಗಳೆಡೆಯಲಿ ತೊರೆಯೊಂದು
ಮೆಲ್ಲನೆ ಹೊನಲಿಡುವುದು ಮುಂದು.
ಘುಳು-ಘುಳು ನಾದ
ತೊರೆಯು ನಿನಾದ
ಕೇಳಿಸುತಿರುವುದು. — ಬಹು ಮೋದ !

೨

ಕರಿ ಕಲ್ಲಿನಲಿ
ಕುಳ್ಳಿರಲಲ್ಲಿ
ಹಾರುತಲಿಹ ತೆಳು ನೀರ ಹನಿ
ಕಾಲನು ತೊಳೆವುದು, ತೊರೆಯ ದನಿ
ಮೃದು ಸಂಗೀತವ-
ನೊದವಿಸಿ, ಸೊಗವ
ಬೀರುತಲಿರುವುದು ! ಈ ತಾಣ
ಮೌನದ ಶಾಂತಿಯ ನಿಲ್ದಾಣ !!

೧೯೩೬

# ನಕ್ಷತ್ರಗಳು

೧

ನಿಶೀಥ ಕಾಮಿನಿ ಮೆಲ್ಲನೈತರೆ,—
ಸುಶೀತಲಾಮಲ ವಾಯು ಮೋಹಿಸೆ,—
ಅಶೇಷ ಜನ ಮನದಲ್ಲಿಯೊಲವಿನ
ಅಸೀಮ ಲಹರಿಯನುಂಟು ಮಾಡುತ,—
ತಾರಕಾ ಗಣವು
ನಭದಲಿ
ತೋರಿ ಮಿರುಗದುವು!

೨

ಸುನೀಲ ಶೂನ್ಯದ ನಭೋ ವಿತಾನದಿ
ಮನೋಹರಾಕೃತಿಯಿಂದ ಮೆರೆಯುವ
ಅನಂತ- ಅಗಣಿತ ತಾರಕಾ ಗಣ-
ವನನ್ಯ ಮಾನ್ಯತೆಯಿಂದ ಮಿನುಗುತ,—
ಶೋಭಿಸುತ್ತಿಹವು!
ಮನವನು
ಮೋಹಿಸುತ್ತಿಹವು!!

೩

ಅಸಂಖ್ಯ ತಾರಾವೃಂದವಂದದಿ
ಸುಸೌಖ್ಯ- ಶಾಂತ- ಗಭೀರ- ಮೌನದ
ಸುಸೌಮ್ಯ- ಶುಭ ಸಂದೇಶವನು
ಅಶೇಷ ಮಾನವ ವೃಂದಕುಸುರುತ
ಲೋಕ ನಾಯಕನ
ಲೀಲಾ-
ನೀಕ ಪಡುಹುವುವು!

# ತಂಗದಿರ!

## **ವಾರ್ಧಿಕ**

೧

ಮುಗಿಲುಗಳ ಮೆಟ್ಟಲಿನ ಮೇಲೆ ಮೆಲುನಡಿಗೆಯಲಿ
ನಗು ನಗುತ ಬಿಡದೇರಿ ಬರುತಿರುವೆ ತಂಗದಿರ!
ಒಗುಮಿಗೆಯ ಗಮನದಲಿ ಹೋಗುತಿಹೆ ಯಾವೆಡೆಗೆ ?
ಗುರಿಯೇನು ಗುರುತಿಲ್ಲವೇ ?
ಸೊಗದ ಸನ್ಮಾಂತ್ರಿಕದ ಮಾಟದನುಭವದಿಂದ
ಮೊಗವು ವಿಕಸಿತವಾಗಿ ತೋರುವುದು. ಶಶಿ! ನಿನ್ನ
ಸೊಗಸುಗಾರ್ತಿಯ ಮಡದಿ ರೋಹಿಣಿಯ ಬಳಿಗಿಂದು
ವಿಹರಿಸಲು ಪೋಪೆಯೇನು ?

೨

ಅನುದಿನವು ವಿಧು! ನೀನು ಮೂಡುತಿಹೆ— ಮುಳುಗುತಿಹೆ.
ಮನಸಿನೊಳಗಿದಕಾಗಿ ಬೇಸರಿಸಿ, ಬಿದಿಯೊಡನೆ
ಅನುನಯದಿ ಮಾಸಕೊಂದಾವರ್ತಿ ದಿನವೊಂದ
'ರಜೆ' ಯೆಂದು ಪಡೆದೆಯೇನು ?
ಇನನೊಂದು ವಿಧಿಯಿಂದ ಇನಿತೊಂದು ತಪ್ಪದೇ
ದಿನ ದಿನಂ ಮೂಡುವಂ—ಬಾಡುವಂ; ಶಶಿ ! ನೀನು
ಹುಣ್ಣಿಮೆಯ ಬಿಟ್ಟಳಿದ ರಜನಿಯಲಿ ಅನಿತನಿತು
ಬೆಳಗಿ ಮರೆಯಾಗುವೇಕೆ ?

೩

ನೀನೋಷಧೀಶನಾಗಿರುವೆಯಾದುದರಿಂದ,
ಸಾನುರಾಗದಿ ತರು-ಲತಾಳಿ ಸಸ್ಯಗಳೆಲ್ಲ
ಆನನವನೊಲಿಯುತ್ತಲಿರುತಿಹವು ನಿನ್ನಮೃತ
ಕಿರಣ ಶೀತ ಸ್ಪರ್ಶದಿಂ.

ಕಾನನದಿ ಮಲ್ಲಿಗೆಯು ಮೊದಲಾದ ಕುಸುಮಗಳು
ಸಾನಂದದಿಂದ ನಗುನಗುತ ನೀರಾಜನವ—
ನಾನುವಂತೆಸೆಯುತಿವೆ; ಶಶಿ! ನಿನಗೆ, ನೀನೆಸಗಿ—
ದುಪಕಾರದರಿವಿಗಾಗಿ.

೪

ಎತ್ತಲೂ ತಿರೆಯನ್ನು ತೀವಿ ಜೊನ್ನದ ಸರಿಯು
ಸುತ್ತಲಿಡಿದತಿ ಶೋಭೆಯಾಂತೆಸೆವ ಬಿಳಿ ವೊಸರ
ವೊತ್ತ ಚೆಲ್ಲಿದ ತೆರದಿ ಬಿತ್ತರವನಾಂತಿಹುದು.
ಆದರೂ ತಂಗದಿರನೇ!
ಕತ್ತಲೆಯು ಕಾಲವಾದುದರಿಂದ ಮರಗಳಡಿ—
ಯತ್ತ ಬಿದ್ದೊರಗಿಹುದು ನೆರಳ ಕಾಳಿಮೆಯದನು
ಕಿತ್ತಳಿಸಿ ಬಿಸುಡಲಾರದೆ, ನಾಚಿ, ನೊಗದಲ್ಲಿ
ಮಾಲಿನ್ಯವನ್ನಾಂತೆಯು?

೫

ತೊಳತೊಳಗಿ, ಬೆಳಬೆಳಗಿ, ಕಳೆವೆತ್ತು ಪೊಳೆಯುತಿಹೆ!
ಕಿಲಕಿಲನೆ ನಗುನಗುತ ಹಾಸ್ಯರೋಚಿಯನೆಲ್ಲ
ಬಳಗಳಿಗು ಪಸರಿಸುತ, ಸಂತೋಷ ಸಾಗರದೊ-
ಳೋಲಾಡಿ ತೇಲಾಡುತ,
ಒಲಿಯುತ್ತ, ನಲಿಯುತ್ತ, ಮುಗಿಲುಗಳ ಮರೆಯಲ್ಲಿ
ನೆಲಸುತ್ತ, ಹೊರಬರುತ, 'ಕಣ್ಣು ಮುಚ್ಚಾಲೆ' ಯಲಿ
ಲಲಿತ ಲೀಲೆಯನಾಂತು, ಬಾಲಕೇಳಿಯ ನಟಿಸಿ,
ಮೆರೆವೆಯೇಂ ತಂಗದಿರನೇ?

## ತಾರಾಯಾಮಿನಿ

೧

ಇಸಿತೇಕೆ ತೊಳಗುವಿರಿ ತಾರೆಗಳಿ! ನೀವಿಂತು ?
ಆರ್ಗೆ ಹೊರಗೆಡಹುವಿರಿ ಸೌಂದರ್ಯಸುಧೆಯಂ ?
ನಿಮ್ಮ ಚೆಲುವನು ಕಂಡು, ಭವದ ಬವಣೆಯ ಮರೆತು,
ಒರ್ಚಣವನಾದರೂ ಸೊಗವಡುವನಾವಂ ?

೨

ನೇಸರಾರಲು, ಮಬ್ಬಿನುಬ್ಬೇರೆ, ಬಾಂಬಯಲೊ-
ಳೊಗೆದು ಕಣ್ ಬಿಡುತಿಹಿರಿ ಬೆಳ್ಪಿನಗೆಯಂತೆ;—
ಕಗ್ಗತ್ತಲೆಯ ಕರಿಯ ಸೀರೆಯಲಿ ಬೆಳ್ಪೊನ್ನ
ಮಿರು ಮಿರುಗುವಲರನ್ನು ಕೇವಣಿಸಿದಂತೆ.

೩

ಇರುಳ ನೀರೆಯ ಮುಡಿಗೆ ತೆತ್ತಿಸಿದ ಉಜ್ಜ್ವರದ
ಪರಲುಗಳ ಪಾಂಗಿನಲಿ ಪೊಂಗಿ ನೀವಿಹಿರಿ.
ದೇವನೊಲುಮೆಯ ಜಾಣ್ಮೆಯದ್ಭುತದ ಕೈ ಚಳಕ-
ದೊಂದು ಕೈಪಿಡಿಯ ಪ್ರತೀಕದಂತಿಹಿರಿ.

೪

ನಿಮ್ಮಮಿತ ಲಾವಣ್ಯ ಲಹರಿಯನು ಪದೆದೀಂಟಿ,
ವಿಶ್ವ ವೈಚಿತ್ರ್ಯಬ್ಧಿಯಲ್ಲಾವನಾಳ್ವಂ ?
ಮನೆಯಿಂದ ಹೊರಬಂದು, ಕತ್ತನ್ನು ಮೇಲೆತ್ತಿ,
ಚುಕ್ಕಿಗಳಿ! ನಿಮ್ಮ ಚೆಲುವನು ನೋಳ್ಪನಾವಂ ?

# ಕೋಗಿಲೆ

೧

ಕೋಗಿಲೆ ಕುರೂಪಿಯೆನೆ, ರಾಗದಲಿ ಹಾಡುತಿಹ
ಮಧುರ ಸಂಗೀತವಶ್ರಾವ್ಯವಹುದೇನು ?
ಭಾವ-ರಸ ಬೆರೆದಿರುವ ಕೋಗಿಲೆಯ ಸವಿ ಸರವ
ಕೇಳೆನೆಂದಾರಾದರೊರೆಯುತಿಹರೇನು ?

೨

ಮಾಮರದ ಕೊಂಬೆಯಲಿ ಮಾಂದಳಿರ ಮೆಲ್ಲುತ್ತ,
ನವ ವಸಂತನ ಗಾನ ಗೈವ ಕೋಗಿಲೆಯು,
ಆಗೊಮ್ಮೆ ಈಗೊಮ್ಮೆ 'ಕುಹೂ-ಕುಹೂ' ಎಂದು
ಮಧುರ-ಮಂಜುಲ ಕಂಠದಿಂದುಲಿಯುತಿಹುದು.

೩

ಒಂದೆ ಹಾಡಿನೊಳೆನಿತೊ ಭಾವವನು ಬಿಂಬಿಸುತ,
ಮನವ ರಂಜಿಸುತಿರುವ ಪಿಕವು ವರಕವಿಯೊ ?
ಅಲ್ಲವಿರೆ ಶಾರದೆಯು ವರದ ಹಸ್ತವನಿದರ
ಮಸ್ತಕದ ಮೇಲಿಟ್ಟು ಹರಸಿರುವಳೇನೊ ?

೪

ಒಂದೊಮ್ಮೆ ಪಿಕದುಲಿಯು ಮಾನವರ ಕಿವಿದೆರೆಗೆ
ಕೇಳಿದರೆ ಹೃದಯಾಬ್ಧಿ ವೀಚಿಯಾಡುವುದು.
ಮಧುಮಾಸದಲಿ ಮೆರೆವ ಕೋಗಿಲೆಯು ಸಾಮಾನ್ಯ
ಪಕ್ಷಿಯಲ್ಲದು ಮಧುರ ಗಾನ ದೇವತೆಯು !

೧೯೪೩

# ಅಂದೊಂದು ದಿನದಲ್ಲಿ,—

೧

ಅಂದೊಂದು ದಿನದಲ್ಲಿ,— ನಿಶಿಯ ನೀರವದಲ್ಲಿ.—
ಇಂದುವಿನ ತಿಳಿಯಾದ ಬೆಳದಿಂಗಳಲ್ಲಿ.—
ಒಂದಿಯಾನಂದವನು ಬಗೆಯ ಬೇಸರ ಕಳೆಯೆ,
ಮಂದಿರದ ಹೊರಜಗಲಿಯಲ್ಲೊರಗಿದೆ

೨

ನೀಲಿ ನೀಲಾಕಾಶಕೆನ್ನ ದಿಟ್ಟಿಯನಿಟ್ಟೆ,—
ಲೀಲೆಯಿಂದಲಿ ಚಂದ್ರ ಸಾಗುತಿಹನು.
ಹಲಕೆಲವು ತಾರೆಗಳು ತಮ್ಮ ಪತಿ ವಿರಹವನು
ತಾಳಲಾರದೆ ನಿಲ್ಲಸಡಿಯಿಡುವುವು

೩

ಬಂಧು-ಬಳಗವನೆಲ್ಲ ಬಿಟ್ಟು. ಕಾಲನಗಾಧ
ಕಂದರದಿ ಮರೆಯಾಗುತಿರುವ ನರರಂತೆ,
ಅಂದು ಕೆಲ ತಾರೆಗಳು ತಮ್ಮ ಸಹಚರರನ್ನು
ಒಂದುಳಿದು, ಕೆಳಬಿದ್ದು ಮರೆಯಾಗುತಿಹವು

೪

ನೀಲಿಮೆಯ ನಭದಲ್ಲಿ ರಜತ ಚಂದ್ರನ ಕಿರಣ—
ಮಾಲೆ ಸಾಲಿಟ್ಟೆಸೆಯೆ ತೆರೆಯ ತೆರದಲ್ಲಿ,
ಹಾಲ ಕಡಲಿನ ಹೆಂಪ ಲೀಲೆಯಿಂದೊಳಗೊಂಡು
ಮೇಲೆಯಾಗಸವಿಂದು ತೊಳಗುತಿಹುದು

೫

ಎತ್ತಲೂ ಪ್ರಕೃತಿಯದು ಮೌನ ರಾಜ್ಯದ ಮರೆಯೊ-
ಳೊತ್ತರದಿ ಮಲಗಿ ನಿದ್ದೆಯಗೈಯುತಿರಲು,
ಸುತ್ತಲಿರುತಿಹ ಬೆಡಗ ನೋಡಿಯರೆಚಣ ಸರಿಯೆ,
ಎತ್ತಣಿಂದಲೊ ಬಂತು ನಿದ್ದೆಯಾವರಿಸಿ,

೬

ರಾತ್ರಿಯೆಲ್ಲವು ಸವೆಯೆ ಸವಿಯಾದ ಕನಸಿನಲಿ,
ಮತ್ತೆನ್ನನೆಬ್ಬಿಸಿತು ಮೈದಡವುತ—
ಹತ್ತಿರದ ಮರ-ಬಳ್ಳಿ-ಗಿಡಗಳೆಲೆಯೆಡೆಯಲ್ಲಿ
ಸುತ್ತಿ ಸುಳಿಯುತಲಿದ್ದ ತಂಗಾಳಿಯು

೭

ತಂಬೆಲರು ತನ್ನ ಸುವಿಲಾಸದಿಂದೆಸೆಯುತ್ತ,
ತುಂಬಿ ನವಶಕ್ತಿಯನು ಅಂಗಾಂಗದಲ್ಲಿ,
ಬೆಂಬಿಡದೆ ಮೆಯ್ಯನ್ನು ಹಾದು ಹೋಗಲು, ನವಿರು
ಬಿಂಬಿಸಿತು; ನಲವೊಲಿಯಿತೆನ್ನ ಮನಕೆ

೮

ಎಂದಿಗೂ ಬಾರದಿಹ ಹೊಸ ಹುರುಪು ಬಗೆಯೊಳಗೆ
ಬಂದು ಶಾಂತಿಯ ಕೊಡಲು, ಎದ್ದು ಕುಳಿತೆ.
ಮುಂದೆ ನಾ ಸುತ್ತಲೂ ಸರಿಯಿಸಲು ನೋಟವನು,
ಸುಂದರದ ದೃಶ್ಯವದು ಕಂಡಿತೆನಗೆ—

೯

ಉಷೆಯು, ಹೊಸ ಮಿರುಗು ಮೈವೆತ್ತು ರಂಜಿಸುತಿರುವ
ಹೊಸ ವಸ್ತ್ರವುಡಿಸಿಹಳು ಪ್ರಕೃತಿರತಿಗೆ.
ಮಿಸುನಿ ಬಣ್ಣವನದಕೆ ಹಚ್ಚುತಿದ್ದನು ಮೂಡು-
ದೆಸೆಯೊಳರುಣನ ಕೂಡಿ ಬರುವ ರವಿಯು

೧೦

ಉದಯಿಸುವ ನೇಸರಿಗೆ ಸ್ವಾಗತವನೀವಂತೆ,
ಉದಯ ಗಾನವನೆಲ್ಲ ವಿಹಗ ತತಿಯು
ಮುದದಿ ಮಾಡುತಲಿದ್ದುವಲ್ಲದೇ ಬಳ್ಳಿಗಳು
ಇದಿರಿನಲಿ ಹಿಡಿದಿದ್ದುವಲರುಗಳನು

೧೧

ಇಂತೆಸೆವ ನೋಟವನು ಮನದಣಿಯೆ ನೋಡುತ್ತ,
ಸಂತಸವನಾಂತಿದ್ದು, ಈ ತಿರೆಯೊಳು
ಇಂತು ಕಂಗೊಳಿಪಂತೆ ಗೈದ ದೇವಗೆ ನಾನು
ಅಂತರಂಗದಿ ಧನ್ಯವಾದವರ್ಪಿಸಿದೆ.

೧೯೩೫

# ಕವನ ಕಾಮಿನಿ

ಬಾಲ್ಯ ಕಳೆದೆಯೆಂದು ಲಜ್ಜೆ-
ಯೇನು ಕವನ ಕಾಮಿನಿ ?
ಮೊಗವ ತೋರದೆನಗೆ ನೀನು
ಕವಿಸುತಿರುವೆ ಯಾಮಿನಿ

ಮೊದಲು ತೊದಲು ನುಡಿಯೊಳಾದ-
ರೇನು ಭಾವವೆರೆದೆ ನೀ
ಸಹಜ ಕಲ್ಪನಾ ವಿಲಾಸ
ಹಾಸವಿತ್ತು ಪಡಿದನಿ

ಆದರೀಗ ನಿನ್ನ ಸುಳಿವು
ವಿರಳವಿರುವುದೀಕಡೆ
ನೆಲಸಲೆಂದು ನನ್ನ ಮನದೊ-
ಳಿಲ್ಲವೇನು ನಿನಗೆಡೆ?

ಎಲೆಯ ಮರೆಯ ಕಾಯಿಯಂತೆ,
ತಳಿರ ಮರೆಯ ಮಲರವೋಲ್
ಮುಗಿಲ ಮರೆಯ ತಿಂಗಳಂತೆ,
ನೀರ ಮರೆಯ ಮೀನವೊಲ್ —

ತೋರಿಯೆಡಗಿ, ಕಂಡು ಹುದುಗಿ,
ಕಣ್ಣುಕಟ್ಟನೆಸಗುವೆ
ಕಾರ ಹೊನಲಿನಂತೆ ದಡವ
ಮೀರಿ ಹರಿವುದಿಲ್ಲವೆ ?

ನಿನ್ನ ಬಳೆಗಳಲುಗುದನಿಯು
ಕಾಲ ಗೆಜ್ಜೆಯಿಂಚರ
ಈಗ ಕೇಳದಿರಲು ಹೇತು-
ವೇನು ಹಿಂದಿನಾ ತೆರ?

ತಿಳಿಯಿತೊಂದು ಬಾರಿ ನಗುವ
ಜೊನ್ನ ಹಾಲ ಹುಣ್ಣಿಮೆ
ತಿರುಗಿ ಬರುವುದೊಂದು ಸಾರಿ
ಕಪ್ಪು ಸುರಿವ ಕಾಳಿಮೆ

ಇಳಿತ - ಭರತ ಸರಿ ಸಮಾನ
ಪ್ರಕೃತಿ ನಿಯಮವಲ್ಲವೇ?
ಕಪ್ಪು ಕತ್ತಲಳಿದ ಮೇಲೆ
ತೆರೆಯಲೀಗ ಬೆಳಕೆವೆ

ನಕ್ಕು ನಲಿದ ಮುಗ್ಧ ಬಾಲೆ-
ಯೇಕೆ ನಿದ್ದೆಯಿದ್ದೆಯೊ?
ಇದ್ದರೇನು?— ಸದ್ಯ ನೀನು
ಎದ್ದು ಸಿದ್ಧಳಾಗೆಯೊ?

ಎಳವೆ ದಾಟಿ, ಹಿರಿಮೆಯಾಂತು,
ನೋಟ ಮಿಂಚ ಹರಹು ನೀ
ಒಲಿದು ನಲಿದು ನಕ್ಕು ನಗಿಸಿ
ಬಾರೆ ಕವನ ಕಾಮಿನಿ!

ಕುಣಿದು ಮಣಿದು, ಮಾಲಿ ತೇಲಿ,
ಹಾರಿ ತೂರಿಯೇರಿ ಬಾ
ಹೊಳೆದು ಬಳೆದು, ಚೆಲುವು ಚೆಲ್ಲಿ,
ಉಕ್ಕಿ ಸೊಕ್ಕಿ ಮಿಕ್ಕಿ ಬಾ

ರಸವಿಶುದ್ಧೆ, ರೀತಿಪೂತೆ,
　　ಗುಣ ವಿಭೂಷಿತಾಂಗಿಯೆ!
ಧ್ವನ್ಯಲಂಕಾರಯುಕ್ತೆ
　　ಭಾವ–ವೃತ್ತಿ ಸಂಗಿಯೆ!

ಕಲ್ಪನಾ ಕುರಂಗವೇರಿ,
　　ಹಾರಿ ಬಾರೆ ಸುಂದರಿ!
ಶುಭ್ರ ಚಂದ್ರಿಕಾ ವಿಲಾಸ
　　ಲಾಸ್ಯ ಗೈ, ರಸೋದರಿ!

ಸರಸ ಮಧುರ ಸುಧೆಯ ಸ್ನಿಗ್ಧ
　　ಚುಂಬನವನು ಬಿಂಬಿಸು
ಸಾಂದ್ರ ಪುಲಕವಾಗಿಸುತ್ತ,
　　ಸಗ್ಗ ಸೊಗವನೂಡಿಸು

೧೯೪೨

# ಕನ್ನಡದ ವಿಶ್ವರೂಪ

೧

ಕನ್ನಡದ ಹೊಸದನಿಯು
ವಿಶ್ವದಾ ವಿವಿಧ ವಿಧ
ವಾಙ್ಮಯಕ್ಕೆಣೆಯಾಗಿ
ಕಾಣದೇನು ?
ನವ ನವೋನ್ನತ ಭಾವ-
ವೈಖರಿಯು, ಕಲ್ಪನೆಯು
ಹೊಸ ವೃತ್ತಗಳ ನೃತ್ಯ,
ಈ ಸರ್ವ ಸಾಮಸ್ತ್ಯ-
ದಿಂದೇಕ ಮೂರ್ತಿಯಹ
ಕನ್ನಡದ ನಲ್ಬರೆಹ
ಹೊಸ ಹುಟ್ಟನೊಂದುತ್ತ
ಹೊಸ ಹಾದಿವಿಡಿಯುತ್ತ,
ಹೋಗದೇನು ?
ಸುವ್ಯವಸ್ಥಿತ ರೀತಿ
ಯಿಂದ, ನಿರ್ಭೀತಿಯಲಿ,
ನೀತಿಯಲಿ, ಪ್ರೀತಿಯಲಿ
ನಡೆಯದೇನು ?
'ಕನ್ನಡ ಮನೋಹಾರಿ !
ಮನ್ನಣೆಯ ಕಸ್ತೂರಿ !'
ಎನ್ನುವಾ ಮಾತನ್ನು
ನುಡಿಸದೇನು ?

೨

ಕನ್ನಡದ ಹೊಸ ದನಿಯು
ಮೂಢ ರೂಢಿಯನೊಡೆದು,
ಚೈತನ್ಯವನು ಪಡೆದು,
ರಸಋಷಿಯ ಮುಡಿಲಿನಲಿ,
ಶಾಂತಿಮಯ ಕಾಂತಿಯಲಿ,
ಹಾಸ್ಯ ಲಾಸ್ಯವನೆಸಗಿ,
ವೀರ ತಾಂಡವ ನಾಟ್ಯ
ನಲಿಯದೇನು ?
ಮಂಜುಳ ಮನೋಹಾರಿ-
ಯಾಗದೇನು ?
ರಸಿಕ ಜನ ಮಾನಸವ
ಸಂತೋಷ ಸಾಗರದಿ
ತೇಲಿಸುತ, ನಲವಿನಲಿ
ಸಿಲಿಸದೇನು ?
ನಲ್ಗನ್ನಡವ ಮುಂದೆ
ತಾರದೇನು ?

೩

ವಿಶ್ವ ಸಾಹಿತ್ಯದಲಿ:—
ಗ್ರಂಥಗಳ ಸರಣಿಯಲಿ.—
ಕಾವ್ಯಗಳ ಮಾಲೆಯಲಿ,
ಕವಿತೆಗಳ ಕುಂಜದಲಿ,
ಗೀತಗಳ ಗುಚ್ಛದಲಿ,
ಕೀರ್ತನ ವಿತಾನದಲಿ,
ಗರತಿಯರ ಗೀತಿಯಲಿ,
ಜಾನಪದ ಪದಗಳಲಿ,

ಲಾವಣಿಯ ಲಾಸ್ಯದಲಿ,
ಹಾಡುಗಳ ಹಿಂಡಿನಲಿ,
ಆ ಯಕ್ಷಗಾನದಲಿ,
ಹೃದ್ಯವಹ ಗದ್ಯದಲಿ,
ವಚನ ಸಾಹಿತ್ಯದಲಿ,
ಕತೆಗಳ ಕಲಾಪದಲಿ,
ಕಾದಂಬರೀ ಪಥದಿ,
ಹಾಸ–ಪರಿಹಾಸದಲಿ,
ಹರಟೆ–ಹುಚ್ಚಾಟದಲಿ,
ಘರ್ಷಣ ವಿಮರ್ಶೆಯಲಿ,
ವಿವಿಧ ವಿಧ ರೂಪಕದಿ,
ಪದ್ಯ ಮಯ ನಾಟಕದಿ,
ಏಕಾಂಕ ದೃಶ್ಯದಲಿ,
ಚಿತ್ರದ ವಿಚಿತ್ರದಲಿ,
ಪತ್ರಿಕೆಯ ಸೂತ್ರದಲಿ,
ಸುದ್ದಿಗಳ ಸಂಗ್ರಹದಿ,
ಭಾವಗಳ ಮೇಳದಲಿ,
ಕಲ್ಪನೆಯ ವಿವಿಧದಲಿ,
ಕಲೆಗಳ ವಿಲಾಸದಲಿ,
ಕನ್ನಡವು ಮೇಲ್ಮೆಯನು
ಮುಟ್ಟದೇನು ?
ಕರ್ಣ ಕಮನೀಯತೆಯ
ಕರೆಯದೇನು ?
ಕೀರ್ತಿಯು ದಿಗಂತವನು
ಹಬ್ಬದೇನು ?
ಇನ್ನಿತರ ಭಾಷೆಗಳ
ಮುಂಭಾಗದೆಡೆಯಲ್ಲಿ

ಮನ್ನಣೆಯ ಸನ್ನುತಿಯ
ಪಡೆಯದೇನು ?
ತಲೆಯೆತ್ತಿ, ಮುಂದೊತ್ತಿ,
ನಿಲ್ಲದೇನು ?
ವಿಶ್ವರೂಪವನಾಂತು
ಮೆರೆಯದೇನು ?
ಕಳೆಯೇರಿ, ನಲವೇರಿ,
ನಲಿಯದೇನು ?

೪

ಕನ್ನಡದ ಭಕ್ತರಿಗೆ
ನಲ್ಗನ್ನಡಾಂಬಿಕೆಯು,
ಸಾಹಿತ್ಯ ಶಾರದೆಯು,
ವಾಙ್ಮಯ ಬ್ರಹ್ಮನಾ
ರಸ ಸಮಾಧಿ ಸ್ಥಿತಿಯ
ಭಾವೈಕ್ಯದಾನಂದ–
ರೂಪ ಸುಖ ಸಾಮ್ರಾಜ್ಯ–
ವರವನ್ನು ಕರುಣೆಯಿಂ-
ದೀಯಳೇನು ?
ಸಗ್ಗದಾ ಸಿರಿಯನ್ನು
ತೋರಳೇನು ?

# ಪರಿಣಾಮ

೧

ಮೊದಲು ಮುಂಜಾನೆಯದು ಮುಗುಳು ನಗು ನಗುತ,
ಬಳಿಕ ಮಧ್ಯಾಹ್ನವದು ಬಿರುಸು ನಗೆಯಾಗುತ,
ಕಡೆಗೆ ಸಂಜೆಯು ಸಮಯ ಸೌಮ್ಯವಾಗುತ್ತ,
ಕತ್ತಲೆಯು ಕಾಲಿಮೆಯ ಪರಿಣಾಮವು

೨

ಮರದ ರೆಂಬೆಗಳಲ್ಲಿ ಮೊಗ್ಗು ಮೊದಲೊಗೆದು,
ಸರಿಯಾದ ಸಮಯಕ್ಕೆ ಸುಮವಾಗಿ ಬಿರಿದು,
ದಿವಸದವಸಾನದಲಿ ತೊಟ್ಟಿಂದ ಸಿಡಿದು,
ಜೀವನವ ನೀಗುವುದೆ ಪರಿಣಾಮವು

೩

ಸೂರ್ಯನಾದಲು ತಾರೆ ಮಸಕು ಮಿನುಗುತ್ತ,
ರಾತ್ರಿಯಾಗಲು ತೊಳಗಿ ಬೆಳಗುವುದು ಸುತ್ತ,
ಮುಂಜಾವ ಬರಲಂಜಿ ಹಿಂಜರಿಯುತಿತ್ತ,
ನಾಮಾವಶೇಷವದು ಪರಿಣಾಮವು

೪

ಅನತಿದೂರದಿ ತೆರೆಯು ಸಾಗರದೊಳೆದ್ದು,
ಮುಂಮುನರಿಯುತ ಬಂದು ಘೋಷದಿಂದಿದ್ದು,
ದಡಸನಡಹಾಯ್ದಲ್ಲಿ ಮೌನದಲಿ ಮುಗಿದು
ನೊರೆಯಾಗಿ ಮರೆಯುವುದೆ ಪರಿಣಾಮವು

೫

ಆರಂಭದಲಿ ಬಾಲ್ಯಕಾಲವರಳುವುದು,
ಆ ಮೇಲೆ ಯೌವನದ ಗಾಂಭೀರ್ಯವಿಹುದು,
ಕಡೆಗೆ ಮುದುಕನ ಮುದಿಯತನವು ಮಸಗುವುದು,
ಬಾಳು ಬರಿದಾಗುವುದೆ ಪರಿಣಾಮವು

೧೯೩೭

# ಕುಲಪತಿ*

ಶಾಂತಿ ಸೌರಭ ಮಿಲಿತ, ಲಲಿತ ಹರ್ಷೋತ್ಕಲಿತ,
ಮುದಿತ ಶುಕ–ಪಿಕ–ಶಾರಿಕಾದಿ ಪಕ್ಷಿಸ್ತೋಮ
ಕಲ ಕಲ ನಿನಾದಯುತ, ವಿವಿಧ ಪುಷ್ಪಿತ ಕುಸುಮ
ನಿಚಯ ಮಧು ಸಂಗ್ರಹೋದ್ಯುಕ್ತ ಷಟ್ಪದ ನದಿತ,
ಶುದ್ಧ ಪುಣ್ಯಾರಣ್ಯ ಭೂಮಿಯೆಸೆವುದದೊಂದು
ಅಲ್ಲಿ ಕುಲಪತಿಯೋರ್ವನಿರುವ ಸಾರಸ್ವತಾ–
ರಾಧನೋದ್ಯೋಗ ತತ್ಪರನಾಗಿ. ಅವನು ತಾ–
ನೋರ್ವನೇ ಹತ್ತು ಸಾವಿರ ಮಂದಿ ಮುನಿ ಬಂಧು
ಶಿಕ್ಷಾರ್ಥಿ–ವಿದ್ಯಾರ್ಥಿ ವೃಂದಕ್ಕೆ ಸರಿಯಾಗಿ
ಅನ್ನ–ವಸ್ತ್ರಾದಿಗಳನಿತ್ತು, ವೇತನ ರಹಿತ
ಶಿಕ್ಷಣಾಧ್ಯಾಪನವನೊಲಿದೆಸಗುವನು ಸತತ.
ಸೌಲಭ್ಯಕಾಗಿ ಶಿಷ್ಯರು ಪರಸ್ಪರವಾಗಿ
ಸಹಕರಿಸುತಿರಬಹುದು. ನೃಪಸಾಹ್ಯವಿರಬಹುದು.
ಪೂರ್ವಿಕರ ವಿಶ್ವವಿದ್ಯಾನಿಲಯವಿದು! ಸಾಧು !!

೧೯೩೮

* "ಮುನೀನಾಂ ದಶ ಸಾಹಸ್ರಂ ಯೋನ್ನದಾನಾದಿಭಿಃ ಸದಾ ।
ಅಧ್ಯಾಪಯತಿ ವಿಪ್ರರ್ಷಿರಸೌ ಕುಲಪತಿಃ ಸ್ಮೃತಃ ॥"

(ಹತ್ತು ಸಾವಿರ ಮುನಿಗಳಿಗೆ ಅನ್ನದಾನ ಮೊದಲಾದವುಗಳಿಂದ ಯಾವಾಗಲೂ ವಿದ್ಯೆ ಹೇಳಿಕೊಡುತ್ತಿರುವ ಬ್ರಾಹ್ಮಣ ಋಷಿಗೆ 'ಕುಲಪತಿ' ಎಂದು ಹೆಸರು.)

'ಅಭಿಜ್ಞಾನ ಶಾಕುಂತಲ' ದ ಕಣ್ವನು ಇಂತಹ ಕುಲಪತಿಯು.

## *ಮಹಾತ್ಮಾಗಾಂಧಿಗಾಗಿ,—

೧

ಸತ್ಯ ಪೂರ್ಣ ಜ್ಯೋತಿ ಬೀರುವ
ಬೆಳಕಿನಲಿ ಮುಂದರಿಯುವ,
ನಿತ್ಯ-ನಿರ್ಮಲ ಯೋಗಿ, ಸತ್ಯಾಗ್ರಹಿ
'ಮಹಾತ್ಮ'ಗೆ ವಂದನಂ

೨

ತಾನು ನಡೆಯುವ ನಡತೆಯಿಂದಲೆ
ಸರಳ ಜೀವನ ಸಾರವ
ಮಾನವರಿಗೊರೆಯಿಸುವ 'ಮೋಹನ-
ದಾಸ'ಗಿಂದೀ ವಂದನಂ

೩

ತ್ಯಾಗಪೂರ್ವಕವಾದ ಯೋಗದಿ
ವಿಶ್ವ ಶಾಂತಿಯನೊದನಿಸಿ,
ಚಾಗದಲಿ ಭೋಗವನು ಕಂಡಿಹ
'ಕರಮಚಂದ'ಗೆ ವಂದನಂ

೪

ಶಾಶ್ವತ ಪ್ರೇಮಮಯ ಪಥದಲಿ
ಧರ್ಮವನು ಮುನ್ನಡೆಯಿಸಿ,
ವಿಶ್ವ ಸಮತೆಯ ಸಾರಿ ತೋರುವ
'ಗಾಂಧಿ'ಗಾಗೀ ವಂದನಂ

---

* ಮಹಾತ್ಮಾ ಗಾಂಧಿಯವರು ಮಂಗಳೂರಿಗೆ ಬಂದಿದ್ದಾಗ ಬರೆದುದು.

೫

ಶ್ರೀ ಮಹಾತ್ಮಾ ಗಾಂಧಿಯೇ ನವ
ಯುಗ ವಿಭೂತಿ ವಿರಾಗಿಯು !
ನೇಮ-ನಿಷ್ಟೆಯ, ಶಾಂತಿ–ದಾಂತಿಯ
ಸತ್ಯ–ಸತ್ವದ ಯೋಗಿಯು !!

೬

ಇವನ ಘೋರಧ್ಯಾವ್ರತವನಿಂಟುತ
ತಣಿದ ಮಾನವ ಮಂಡಲಿ
ಭುವನ ಮಾಸಿತವಾದ ಸತ್ಯ–
ಪ್ರೇಮ ಕಾಂತ್ರಿಪ್ರಮೋಲವಿಲಿ.

೭

ತನ್ನ ಮೋಹನ-ಅಮೃತಮಯ ವಾ–
ಣಿಯಲಿ ಜನರನು ಬೋಧಿಸಿ,
ಸನ್ನುತವದಾಗಿರುವ ರಾಷ್ಟ್ರದ
ಸೇವೆ ಮಾಡಿಪನೊಲಿಯಿಸಿ !

೮

ಲೋಕ ಕಲ್ಯಾಣದ ಮಹತ್ವೇ–
ಚ್ಛೆಯಲಿ ಸತ್ಯಾಗ್ರಹವನು
ಸಕಲ ಮಾನವ ಮನದಿ ಬಿಂಬಿಸಿ,
ಉದ್ಧರಿಸಲುಜ್ಜುಗಿಪನು.

೯

ಕರ್ಮಯೋಗಿಯ ಕಾರ್ಯದಲಿ ಸಹ–
ಕರಿಸಿ ಸೇವೆಯನೆಸಗುವ !
ಧರ್ಮ ಮಾರ್ಗ ಧ್ವಜವ ಪ್ರೇಮಾ–
ಕಾಶದಲಿ ಮೇಲೆತ್ತುವ!!

# ಅನಂತ ಶೂನ್ಯ

೧

ಅನಂತ ಶೂನ್ಯದಾಳದಲಿ,
ದುರಂತವಾದಗಾಧದಲಿ
ವಿಶಾಲ ನೀಲ ಮಾಲೆಯಲಿ
ತಾರೆಯೊಂದು ಮೆರೆಯಲಿ!

೨

ಅರಿಗೇನು? ಏತಕೆಂದು?
ಅರಿಯಲಾರು ಬಲ್ಲರಿಂದು?
ದಿನವದರಳಿ ಬಾಡಲಂದು,
ಮಿನುಗಿ, ಮಿರುಗಿ ಕಾಂಬುದು!

೩

'ತನ್ನ ಬೆಳಕಿದಲ್ಪವೇನೊ,
ಇನ್ನು ಲೋಕವರಿಯದೇನೊ!'
ಆದರ ತಿಳಿವೆ ಇಲ್ಲವು;
ಉದಿಸುತಿಹುದು ನಿತ್ಯವೂ!

೪

ಹಿಂದೆ ಹಗಲು ಮುಗಿದಿದೆ;
ಮುಂದೆ ಹಗಲು ಬರಲಿದೆ.
ನಡುವೆ ನಿಶಿಯ ಗಗನದೆ
ಒಡನೆ ತಾರೆ ಮಿನುಗಿದೆ!

೫

ಸೂತ್ರ ಬದ್ಧ ರೀತಿಯಲ್ಲಿ,
ಅತ್ತ ಶೂನ್ಯ ವೀಥಿಯಲ್ಲಿ
ನಿಶಿಯು ವಿಪುಲ ಕಾಲದಲ್ಲಿ
ಎಸೆಯೆ ಹೇತುವೇನವಲ್ಲಿ ?

೬

ಮರೆತ ವೇಳೆ ತಿಳಿಯದು;
ಬರುವ ಕಾಲವರಿಯದು.
ಮಧ್ಯ ಜನ್ಮವೇಕದು ?
ಶುದ್ಧ ಶೂನ್ಯವೇನದು ?

೭

ಏನೊ,— ಏಕೊ,— ಅರಿಯದು.
ಅನಂತ ಶೂನ್ಯವಿರುವುದು.
ಅವನ ಸೂತ್ರದಂತಿದು
ಮಿನುಗುತಿಹುದು—ದಿಟವದು !

೧೯೩೪

# ಹಿಂದಿನ ಕಾಲದ ಒಂದು ಚಿತ್ರ

## (ಕಥಾ ಕವನ)

೧

ಏಳಲಿಕಾರದೆ, ಮರಣದ ಶಯ್ಯೆಯೊ-
ಳೊರಗಿಹನೋರ್ವನು ಹಳೆ ಮುದುಕ
ಕಳೆದಿದೆ ಪ್ರಾಯದೊಳೆಪ್ಪತ್ತರ ಗಡಿ
ಸಾಯುವ ಸಮಯವು ಸನಿಯಕಿದೆ.
ಬಳಿಕಾ ಮುದುಕನು ಒಂದು ದಿನ
ಅಳಿಯಲು, ಬರಡಾಯಿತು ಪ್ರಾಣ

೨

ಒಂದರ ಮೇಲೊಂದಾಗುತ ನಾಲುಕು
ಸಂದಿವೆ ಮುದುಕಗೆ ಮದುವೆಗಳು
ಪೊಂದಿರೆ ಮರಣವ ನಾಲ್ಕನೆ ಹೆಂಡತಿ,
ಮುಂದಕೆ ಮದುವೆಯ ನಿಶ್ಚೈಸಿ,
ಎಂಟೇ ವರ್ಷದ ಹುಡುಗಿಯನು
ಮುದುಕನು ಮುದದಲಿ ವರಿಸಿಹನು

೩

ಮುದುಕನ ಸಾವಿನ ಸಮಯದಿ ಹುಡುಗಿಯು
ಬೀದಿಯೊಳೋರಗೆಯವರೊಡನೆ
ಮುದದಲಿ ಮಣ್ಣಿನೊಳಾಟವನಾಡುತ-
ಲಿದ್ದಳು ಚಿಂತೆಗಳಿಲ್ಲದೆಯೆ !
ಆಗಲೆ ಅಲ್ಲಿಗೆ ಅವಳ ಪಿತ
ಬೇಗನೆ ಬಂದನು ದುಃಖಿಸುತ

೪

ಅಂಥಾಚಾರವನೆಲ್ಲವ ತಪ್ಪದೆ
ತನ್ನಯ ನಿಯಮಾವಳಿಗಳಲಿ
ಒಂದಿಸಿಯಾಚರಿಸುವ ಕರ್ಮಿಷ್ಟ
ಶ್ರೋತ್ರಿಯ ಬ್ರಾಹ್ಮಣನವಳ ಪಿತ.
ಆದರಿಂದಾ ಎಳೆ ಹುಡುಗೆಯನು
ಬಾಲ್ಯ ವಿವಾಹಕೆ ತೆತ್ತಿಹನು

೫

ಗಂಡನು ಸತ್ತರು, ಕಂಬನಿ ಕರೆಯಲು
ತಿಳಿಯದ ತನ್ನ ಕುಮಾರಿಯನು
ಕಂಡನು ತಂದೆಯು ಬಳಿಕವಳೊಡನೆ
ಹೇಳಿದನಾಗಲೆ ನಯ ನುಡಿಯ.
ತಂದೆಯ ಮಾತನು ಕಿವಿಗೊಟ್ಟು,
ಕೇಳಿದಳವಳಾಟವ ಬಿಟ್ಟು!

೬

"ಮಗಳೇ! ನೀನೊಂದತಿ ಶುಭ ಕಾರ್ಯವ-
ನಿಂದೆಸಗಲೆ ಬೇಕದರಿಂದ
ಸೊಗದಲಿ ನಿನ್ನಯ ಪತಿಯೊಂದಿಗೆ ನೀ-
ನತಿಹಿತದಲಿ ಬಾಳಲು ಬಹುದು.
ಅಲ್ಲದೆ ನಿನ್ನಿಂದೇಳುತಲೆ-
ಯವರನು ನೀನುದ್ಧರಿಸುವೆಲೆ!"

೭

ಎಂದುದ ಕೇಳುತಲೊಪ್ಪುತ ಹುಡುಗಿಯು
ಬಂದಳು ಮುದದಲಿ ಮನೆಯೆಡೆಗೆ
ಅಂದವಳನು ಬಳಿಕಂದದಿ ಮೀಯಿಸಿ,
ಹೊಸ ಹೊಸ ಉಡುಗೆಯನುಡಿಸುತ್ತ,—
ಬಗೆವಗೆಯಾಭರಣಾದಿಗಳ
ತೊಡಿಸುತ, ಸಿಂಗರಿಸಿದರವಳ

೮

ಬಂಧುಗಳೊಂದಿಗೆ ಮೆರವಣಿಗೆಯಲಿ
ಮುದುಕನ ಶವವನು ಮಸಣದೆಡೆ
ತಂದರು; ಆಗಲೆ ತಂದೆಯು ಹುಡುಗಿಯ–
ನಲ್ಲಿಗೆ ಕರೆಯುತ ಕೊಂಡೊಯ್ದ.
ಏನೂ ಅರಿಯದ ಆ ಕನ್ಯೆ
ನಡೆದಳು ದಿಬ್ಬಣವೆಂದೊಡನೆ.

೯

ಚಿತೆಯನು ವಿರಚಿಸಿ, ಮುದುಕನ ಶವವನು
ಮಲಗಿಸಿ ಬಿಟ್ಟರು ಅದರಲ್ಲಿ
ಜೊತೆಯಲಿ ಹುಡುಗಿಯನೊಡನೆಯೆ ಮಲಗುವ
ತೆರದೊಳಗೆಸಗಿ ಪುರೋಹಿತರು,
ಮಂತ್ರಗಳೇನನೊ ಹೇಳಿದರು.
ತಂತ್ರದಿ ಕ್ರಿಯೆಗಳ ಮಾಡಿದರು.

೧೦

ಬಳಿಕಾ ಹುಡುಗಿಯ ತಂದೆಯೆ ಕಲ್ಮನ–
ದಿಂದಲಿ ತನ್ನಯ ಕೈಮುಟ್ಟಿ,
ಜ್ವಲಿಸಿದನಾಗಳೆ ಕಾಷ್ಠದ ನಾಲುಕು
ಮೂಲೆಗಳಾಪರಿಯೇನೆಂಬೆ!
ಬೆಂಕಿಯು ಮೈಯನು ಮುಟ್ಟಿಸಲು.
ಕನ್ಯೆಯು ಕಿಟ್ಟನೆ ಕಿರಿಚಿದಳು!

೧೧

ಹುಡುಗಿಯು ಚಿತೆಯಿಂ ದುಮುಕುತಲೋಡಲು.
ಬಾಂಧವರವಳನು ಬೆದರಿಸುತ,
ಹಿಡಿದಾ ಕಾಷ್ಠಕೆ ದೂಡಿದರಾಗಲೆ
ಒಡನೆ ಪುರೋಹಿತ ಶೀಘ್ರದಲಿ,—
ಪ್ರಾಯಶ್ಚಿತ್ತವ ಮಾಡಿದನು.
ಬೆಂಕಿಯ ಬಿರುಸಾಗುರಿಸಿದನು

೧೨

ಬಾಲೆಯು ಬೆಂಕಿಯ ಬೇಗೆಯ ಸಹಿಸಲಿ—
ಕಾಗದೆ ಕೂಗುತಲಿರುತಿರಲು,
ಆಲಿಸಿ, ರೋದಿಪ ದನಿಯದು ಕೇಳದ
ತೆರದಲಿ ಡೋಲು—ನಗಾರಿಯನು—
ಕಿವಿ ಕಿವುಡಾಗುವ ರೀತಿಯಲಿ
ಮೊಳಗಿಸಿ ಬಿಟ್ಟರು ಬೇಗದಲಿ

೧೩

ತಿರುಗಾ ಬಾಲಿಕೆ ಬಾರದ ತೆರದಲಿ
ಬಿದಿರಿನ ಉದ್ದದ ಕೋಲಿನಲಿ
ಉರಿಯುವ ಕಿಚ್ಚಿಗೆ ದೂಡುತಲೊತ್ತಿ,
ಹಿಡಿದರು ಕೆಲವರು ಬಂಧುಗಳು
ಹುಡುಗಿಯು ಮೈಲ್ಗೊಡಲಗ್ನಿಯಲಿ
ಐಕ್ಯವದಾಯಿತು ಶೀಘ್ರದಲಿ

೧೪

ಆ ಸುಡುಗಾಡಿನ ಸುತ್ತಿನೊಳೆಲ್ಲಿಯು
ನಟ್ಟಿರುಳಿನ ನೀರವತೆಯಲಿ,
ಬೀಸುವ ಗಾಳಿಯ ಹೊಯ್ಲಿನೊಳೀಗಲು
ಕೇಳಿಸುತಿರುವುದು ಕೀರುದನಿ!
ಕನ್ಯೆ ಪಿಶಾಚಿಯ ರೂಪಾಂತು
ತಿರುಗುವಳೆಂದೊರೆಯುವರಿಂತು!

೧೯೩೭

## ವಿಶ್ವ ಸಾಗರದೂರ್ಮಿಯಲಿ,—

೧

ವಿಶ್ವ ಸಾಗರದೂರ್ಮಿಯಲಿ, ಬಾಳ ದೋಣಿಯಿಂದು
ನಶ್ವರದ ಶಾಶ್ವತದಿ ತೇಲುತಿಹುದು
ವೀಚಿಗಳ ಹೊಡೆತದಲಿ, ನೆಗೆತದಲಿ ಬಿದ್ದೆದ್ದು,
ಶೂನ್ಯತೆಯ ಮೌನದಲಿ ಸಾಗುತಿಹುದು

೨

ಸಾಗರವ ಸುತ್ತಲೂ ಆಕಾಶದವಕಾಶ
ತಾಗಿ, ಸರಿಯಾಗಿ ಸುತ್ತಿರೆ, ಮುತ್ತಿರೆ,
ನಡುವಿನಲಿ ಮೂಡಿರುವ ಕಿರುದೋಣಿಯಿಂದೀಗ
ನಡುವುದೆಲ್ಲಿಗೆ ?— ದೂರ ಗುರಿಯಿರುವುದೇ ?

೩

ತೀಡುತಿರೆ ತೀವ್ರ ಝಂಝಾವಾತ, ಸಾಗರವು
ಆಲ್ಲೋಲ--ಕಲ್ಲೋಲವಾಗಿರುವುದು
ರೌದ್ರ–ಭೀಕರ ವೀಚಿ ಮಾಲೆಗಳ ಮೇಲಾಟ
ರುದ್ರ ದೃಶ್ಯವನುಂಟು ಮಾಡಿರುವುದು

೪

ವಿಶ್ವ ಗರ್ಭವು ಬಿರಿದು, ಸಿಡಿದೊಡೆವ ತೆರ ಕಡಲು,
ಭೀಷಣಾದ್ಭುತವಾಗಿ ಘೋರ್ಗರೆವುದು
ಕಾಳರಾತ್ರಿಯ ಕೃಷ್ಣಲೀಲೆ ತಾಂಡವ ನೃತ್ಯ-
ವೆಸಗುವುದು— ಸುತ್ತಲೂ ಶೂನ್ಯ ಶಾಂತಿ

೫

ಇಂತು ಈ ಪರಿಯಿಂದನಂತ ಭೀಕರವಾದ
ಸನ್ನಿವೇಶದಿ ಸುಳಿಯುತಿಹುದು ನೌಕೆ
ಭೀತಿ ರೀತಿಯನುಳಿದು, ಧೃತಿಯ ನೀತಿಯ ತಳೆದು;
ನಿಶ್ಚಲ ಪ್ರಗತಿಯಲಿ ಮುಂದರಿವುದು

೬

ಗುರಿಯು ನಿಶ್ಚಿತವಿಲ್ಲ;—ಸರಿಯುವುದ ಬಿಟ್ಟಿಲ್ಲ
ಆವ ತಾಣಕೆ ಗಮನವೆಂದರಿವರಾರು ?
ಸಣ್ಣ ದೋಣಿಯಿದಿಂದದೃಶ್ಯ ಮಂಗಳಧಾಮ—
ಕ್ಕೈದುವುದೆ ?—ಸುಪ್ತ ಗರ್ಭಕ್ಕಿಳಿವುದೇ ?

೧೯೩೫

## ಅಮ್ಮ!

(ವಿಯೋಗ ಗೀತ)

೧

ಅಮ್ಮ! ನಿನ್ನ ವಿಯೋಗದರಿವಿನಲಿ ನನ್ನೆದೆಯು
ಸಂತಾಪದಲಿ ಸಿಡಿಯುತಿತ್ತು!
ದುಮ್ಮಾನದುರಿಯಲ್ಲಿ ಆಹುತಿಗೆ ಸಂದಿತ್ತು!
ಮನವು ಸುಡುಗಾಡಿನಂತಿತ್ತು!

೨

ಕಣ್ಣೀರ ಕಾಳ್ಪುರವು ಕಾಲಾಗಿ ಹರಿದತ್ತು!
ಉತ್ಸಾಹದೈಸಿರಿಯ ಮೇಲೆ
ಮಣ್ಣೆರಚಿದಂತಾಯ್ತು! ನಲವಿನೊರತೆಯು ಬರತು,
ನಾಟ್ಯವೆಸಗಿತು ದುಃಖಲೀಲೆ!

೩

ಜೀವನದ ದಾರಿಯಲಿ ಕೈದೀಪದಂತಿದ್ದೆ;—
ದೀಪವದು ನಂದಿದಂತಾಯ್ತು!
ಓವಿ ಮುನ್ನಡೆಸುತಿಹ ಊಗೋಲಿನಂತಿದ್ದೆ;—
ಆ ಕೋಲು ಮುರಿದ ಹಾಗಾಯ್ತು

೪

ಕಣ್ಣಿಗಾ ನಿನ್ನ ಭೌತಿಕ ಶರೀರದ ರೂಹು
ಇನ್ನು ಕಾಣದಿರಲೇನಹುದು?—
ನಿನ್ನ ಮಂಗಲ ರೂಪವೆನ್ನ ಹೃದಯದ ಪಟದಿ
ಅಚ್ಚಳಿಯದಂತೆ ನೆಲಸಿಹುದು

೫

ಎನ್ನಲ್ಲಿ ಹೆಚ್ಚಾದ ನಿನ್ನೊಲವ ನೆನೆನೆನೆದು,
ಅವ್ಯಾಜ ಪ್ರೇಮವನು ಸ್ಮರಿಸಿ,
ಉನ್ನತಿಯನೈದುತಿಪೆ ವಿರಹಾಗ್ನಿಯದನೀಗ
ನಿಂದಿಸುವೆ ಕಂಬನಿಯ ಸುರಿಸಿ

೬

ನಾನಂದು ಶಾಲೆಯಿಂದೈತರುವ ಸಮಯದಲಿ
ಒಂದಿನಿತು ಹೊತ್ತಾಗುವಲ್ಲಿ,
ನೀನು ಮನೆಯಿಂದಿಳಿದು ಬಂದೆನ್ನ ದಾರಿಯನು
ಕಾಯುತ್ತ ನಿಂತಿದ್ದೆಯಲ್ಲಿ

೭

ಹೆಣ್ಣುಮಕ್ಕಳು ನಿನಗೆ ಹುಟ್ಟದಿಹ ಮರುಕದಲಿ
ಚಿಕ್ಕಂದು ನಮ್ಮ ತಲೆ ನೆಯ್ದು,
ಗೋರಂಟಿ ಹೂದಂಡೆ ನೆತ್ತಿವರೆಗೂ ಸೂಡಿ,
ಸಂತೋಷವಾಂತಿದ್ದೆಯೊಲಿದು

೮

ಅದನೀಗ ಮನದಲ್ಲಿ ನೆನೆವಲ್ಲಿ, ಕೂರಲಗು
ನೆಟ್ಟಂತೆ ವೇದನೆಯ ಬಾಧೆ
ಒದವುತಿದೆ; ನಿನ್ನತುಲ ಮಮತೆಯರಿವಾಗುತಿದೆ
ನಲ್ಮೆಯಾ ನೆನಹದಾಗುತ್ತಿದೆ

೯

ಅಸ್ಥಿರದ ಜಡದೇಹ ಮರೆಯಾದರೇನಂತೆ?
ನಿನ್ನ ಪರಿಶುದ್ಧಾತ್ಮದೊಲವು
ಸುಸ್ಥಿರವದಾಗೆನ್ನ ಬೆಂಬಿಡದೆ ಸರಿಯಾಗಿ
ಪೊರೆಯುತಿರಲನವರತವು!

೧೯೩೫

## ಎಲೆ ನೋವೆ !

ಪಲ್ಲವಿ

ಎಲೆ ನೋವೆ ! ನೀನೋವದಿಹ ಸುಕೃತಿಯಿರನೇ !

೧

ತನ್ನೊಂದವದೃಶ್ಯವಹ ದುರ್ದಮ್ಯ ಶಕ್ತಿಯಿಂ
ಚೇತನಾತ್ಮಕ ದೇಹಿಗಳನದುಮಿ ನಿಂದು,
ಪ್ರಾಚುರ್ಯದಲಿ ತಾನೆ ತಾನಾಗಿ ನೆರೆ ಸಂದು,
ಸಾರ್ವತ್ರಿಕ ಪ್ರಗತಿಯಲಿ ಮೆರೆಯುವೆ
ಧನಿಕರನು ಸೋಲಿಸುವೆ,
ಬಡವರನು ಗೆಲುವೆ;
ಕನಿಕರವನುಳಿದಿರುವೆ,
ದಯೆಯ ದಾಟಿರುವೆ!

೨

ಕಣ್ಣಿಗೆಟಕದೆ ಜೀವವನು ಕೊರೆದು ಕೊನೆಯುತಿಹ
'ಕಣ್ಣುಕಟ್ಟ'ನ್ನರಿತ ನೀ ವಜ್ರಕೀಟ!
ಮೃತ್ಯುವಿನ ಸಹಚರನೆ! ನಿನ್ನಧಟ ನಾನರಿಯೆ;
ಶಾಂತಿ–ಸುಖಗಳ ನಿತ್ಯ ಶತ್ರುವೇ ನೀನು ?
ಆದರೊಂದೊಳ್ಗುಣವು
ನಿನ್ನೊಳಾಶ್ರಯವು:—
ಧನಿಕ–ದೀನರೊಳೆಲ್ಲ
ಸಮ ಭಾವವಿಹುದು

**೩**

ಸೋವೆ! ಸೀನಿಲ್ಲದಿರೆ, ಏರಿಳಿತ–ಸುಖ–ದುಃಖ
ಮೊದಲಾದ ದ್ವಂದ್ವಗಳ ಅಸ್ತಿತ್ವವಿತ್ತೇ?
ನಿನ್ನಿಂದ ವಿಶ್ವದಲಿ ವಿವಿಧತೆಯು ಮನೆ ಮಾಡಿ,
ಸೌಗದ ಮೌಲ್ಯಕೆ ಬಂತು ಹಿರಿಯತನವು
ಆದರಿಂದ ಸೃಷ್ಟಿಯಲಿ
ನಿನಗಿರುವುದು:—
ಚ್ಯುತಿಯಿರದ—ಆದರೇಂ?
ನುತಿಹೀನದಿರವು!

೧೯೩೮

# ವಿಧಿ

## ೧

ಲೋಕದಲ್ಲಿ
ಧರ್ಮ ವಲ್ಲಿ
ಸೊರಗಿ ಹೋಗಿ,
ಕಾಣದಾಗಿ,
ಕಡೆಗಧರ್ಮ
ಲತೆಯು ಕೊನರಿ,
ನೀತಿಯುಳಿದು,
ರೀತಿಯಿಳಿದು,
ಸ್ವಾರ್ಥ ಪರತೆ
ಪಾಶವಿಕತೆ
ರುದ್ರ ನೃತ್ಯ
ನಲಿವಗತ್ಯ
ಬರೆ, ಮಹಾಂತ
ಸಾಧು-ಸಂತ
ರೂಪದಿಂದ
ದೇವನಿಂದ
ಒಲ್ಮೆ–ನಲ್ಮೆ
ಕೋಡಿವರಿದು,
ಧರ್ಮಪಥವ
ನೀತಿ ಜಯವ-
ನೆತ್ತದಿರುವುದೇ?
ಮುಂದೆ
ಒತ್ತದಿರುವುದೇ?

೨

ಕವಿಯು ಬಾಳ
ತಿಳಿವಿನಾಳ,
ನಲವು-ಚೆಲುವು,
ಕಾವು-ನೋವು,
ಪೂರ್ಣದಳತೆ,
ಕುಂದು-ಕೊರತೆ,
ಅವನ ಕವನ-
ದಲ್ಲಿ ಚೆಲ್ಲಿ,
ಜನತೆಗಾಗಿ
ವಿಶದವಾಗಿ
ತಿಳಿಯದಿರುವುದೇ ?
ಮನವ
ಸೆಳೆಯದಿರುವುದೇ ?

೩

ಚತುರ ಶಿಲ್ಪಿ
ಶಿಲೆಯನೊಪ್ಪಿ,
ಅದರ ಮೇಲೆ
ವಿವಿಧ ಲೀಲೆ
ತೋರುವಂತೆ,
ಬೀರುವಂತೆ,
ಕೊರೆದ, ಬರೆದ,
ವಿವಿಧವಾದ
ಶಿಲ್ಪ ಮೂರ್ತಿ
ಅವಗೆ ಕೀರ್ತಿ
ತಾರದಿರುವುದೇ ?

ಕಲೆಯ
ತೋರದಿರುವುದೇ ?

೪

ನೇಸರಿಳಿಕೆ
ಅಪರ ಜಲಕೆ
ಸಾಗಿ, ಬೈಗು-
ಗೆಂಪದಡಗು-
ವಾಗ, ರಜನಿ
ಅಂಜಿಯಂಜಿ,
ಬಳುಕಿ ಬಂದು,
ಬಳಸಿ ನಿಂದು,
ಮೋಹ ಪಾಶ-
ದಿಂದ ತಬ್ಬಿ,
ನಲಿಸದಿರುವಳೇ ?
ಬಗೆಯ
ನೊಲಿಸದಿರುವಳೇ ?

೫

ಕತ್ತಲಳಿಯೆ,
ಮತ್ತೆ ಜಗದೆ
ಅರುಣ ಕಿರಣ
ಬೀರಿ, ಕಾಣ-
ಬರಲು, ಮುಂದು
ಕಮಲ ಬಂಧು
ಉದಿಸಿ ಬಂದು,
ಭುವನವನ್ನು

ಬೆಳಕು ಕಡಲಿ-
ನಲ್ಲಿ ತೇಲಿ-
    ಸದೆಯೆ ಇರುವನೇ ?
        ಹರ್ಷಿ-
    ಸದೆಯೆ ಬರುವನೇ ?

೬

ಮೂಡ ಬಾನಿ-
ನಂಚಿನಲ್ಲಿ
ಉಷೆಯು ಸಿಹಿಯ
ತೆರೆಯ ತೆರೆದು,
ಕಣ್ಣ ಮಿಟುಕಿ
ನೋಡಲಾಗಿ,
ಮುಗಿದ ಮುಗುಳು
ಬಿರಿದ ಅಲರು
ಆಗಿ, ಕಂಪ
ಬೀರಿ, ಸೊಂಪ
    ಸುರಿಸದಿರುವುದೇ ?
        ಜೇನ
    ಹರಿಸದಿರುವುದೇ ?

೭

ಆರು ಬೇಡ-
ವೆನಲು ಕೂಡ,
ಆರು ಋತುವು
ಚಕ್ರದಂತೆ
ತಿರುಗಿ, ತಿರುಗಿ,
ತಿರೆಗೆ ಸಾಗಿ,

ವರ ವಸಂತ
ಹೇಮಂತ
ವರ್ಷ ಕಾಲ
ಬಿಸಿಲು ಗಾಲ-
ವಾಗದಿರುವುದೇ?
ಸಮಯ
ಸಾಗದಿರುವುದೇ ?

೮

ಜಗದ ಜೀವ-
ಯಾತ್ರೆಯಲ್ಲಿ
ವಿಧಿಯದೃಷ್ಟ-
ವಾಗಿ ನಿಂದು,
ಕಾಣದಿರುವ
ತನ್ನ ಕೈಯ
ಸೂತ್ರದಿಂದ
ನಿಯತವಾಗಿ,
ನಿತ್ಯವಾಗಿ,
ಲೋಕವನ್ನು
ನಡೆಸದಿರುವುದೇ ?
ಜಯವ
ಪಡೆಯದಿರುವುದೇ ?

೧೯೩೫

# ಕಗ್ಗಲ್ಲ ಕಾವ್ಯ*

ಔನ್ನತ್ಯ–ಸೌಂದರ್ಯ ಭಾವೈಕ್ಯದಾನಂದ
ಮೂರ್ತಿಯೇ ಮೆರೆಯುತಿದೆ; ಕಣ್ಮುಂದೆ ಕಾಣುತಿದೆ
ನಶ್ವರದ ಸುಖ–ಭೋಗ–ರಾಗಾದಿ ನಿಗ್ರಹದೆ
ಮೈವೆತ್ತ ನಿಶ್ಚಲ ತ್ಯಾಗ–ಯೋಗಾನಂದ
ಸನ್ಮುದ್ರೆ ಮೊಗದಲ್ಲಿ ಕಳೆಗೂಡಿ ಕುಣಿಯುತಿದೆ
ಪ್ರಾಕ್ತನದ ಬಾಹುಬಲಿ ವೈರಾಗ್ಯ ಸಂಸ್ಥಾನ–
ದೊಂದು ಮೈಸಿರಿಯಲ್ಲಿ ಕಾರ್ಕಲ್ಲಿನಾ ಕವನ
ರೂಪದಲಿ ಕೋದಿಹುದೆ - ಶಿಲ್ಪಕಲೆಯಾಶ್ರಯದೆ?

ಓ ಶಿಲಾ ಕಾವ್ಯರ್ಷಿ! ನಿನ್ನತುಲ ಸಾಮರ್ಥ್ಯ-
ದರಿವೊಂದೆ ಈ ತೆರಂ ಕಗ್ಗಲ್ಲ ಕಾವ್ಯದಲಿ
ಕಂಡರಿಸಿದಂತಿಹುದು. ರಸ-ಭಾವದೋಜೆಯಲಿ
ನಿನ್ನ ಕೈವಾಡದಲಿ ಕೊನರಿಡಿದು ಸಾಹಿತ್ಯ
ಮಾರ್ಗವನ್ನಾಂತಿಹುದು. ನಿನ್ನಮರ ಕಾವ್ಯವಿದು
ಮೌನ ಹೃದಯೋಪಾತ್ತ ಭಾಷೆಯಲಿ ಬೆಸೆದಿಹುದು!

೧೯೩೭

* ಕಾರ್ಕಳವಲ್ಲಿ ಶ್ರೀ ಗೋಮಟೇಶ್ವರ ವಿಗ್ರಹವನ್ನು ನೋಡಿ, ಬರೆದುದು.

# ವಿಜಯ ನಗರವೆ! *

೧

ವಿಜಯ ನಗರವೆ! ವಿಜಯ ನಗರವೆ! ಹಿಂದೆ ನೀ ಮುಂದೊತ್ತಿಹೆ
ನಿಜ ಮಹೋತ್ಸಾಹದಲಿ ಲೋಕವ ಬೆರಗಿನುತ್ಸವವಾಂತಿಹೆ!
ಒಗ್ಗಿನಲಿ ತೊಳ ತೊಳಗಿಹೆ!— ನೀ
ಬಗ್ಗದೆಯೆ ಬೆಳಬೆಳಗಿಹೆ!!

೨

† ಹಿಂದೆ ಮಾರುತಿ--ವಾಲಿ--ಸುಗ್ರೀವಾದಿ ಕಪಿಗಳ ಗೆಳೆತನ,
ನಂದ ರಾಘವ--ಲಕ್ಷ್ಮಣಾರ್ಯರ ಮೈತ್ರಿಯಾ ದೊಡ್ಡಿಸ್ತನ,
ಇವುಗಳಲಿ ಮೆರೆದಾಡಿಹೆ!—ಮು-
ತ್ತವನಿಜೆಯು ತೊಡವಾಂತಿಹೆ!!

೩

ಸಾವಿರದ ಮುನ್ನೂರ ಮೂವತ್ತಾರನೆಯ ಶುಭ 'ಇಸವಿ'ಲಿ
ದೇವರಾಶೀರ್ವಾದದಲಿ ಹೇ ವಿಜಯನಗರವೆ! ನಿನ್ನಲಿ
ಸಾಸಿ ವಿದ್ಯಾರಣ್ಯರು— ಸಿಂ-
ಹಾಸನ ಸ್ಥಾಪಿಸಿದರು.

೪

'ಏಳು, ಸಾಯಣ! ಕಟ್ಟು ಗ್ರಂಥವ' ನೆಂದ ವಿದ್ಯಾರಣ್ಯರು,—
'ಏಳು, ಹರಿಹರ! ಕಟ್ಟು ರಾಜ್ಯವ' ನೆಂದ ಮೌನಿವರೇಣ್ಯರು—
ಎಲ್ಲಿ ಶಾಸ್ತ್ರದ ಕವಿಗಳು?— ಅವ-
ರೆಲ್ಲಿ ಕೀರ್ತಿಯ ರವಿಗಳು?

* ವಿಜಯನಗರದ ಷಟ್ ಶತ ಸಾಂವತ್ಸರಿಕೋತ್ಸವದ ಸವಿನೆನಪಿಗೆ ಅದೇ ವರ್ಷ ಬರೆದುದು.

† ತ್ರೇತಾಯುಗದಲ್ಲಿ, ರಾಮಾಯಣ ಕಾಲದಲ್ಲಿ.

೫

ಮನ್ನಣೆಯ ವೇದಗಳ 'ಭಾಷ್ಯ'ವನೊರೆದ ಸಾಯಣ ವಿಪ್ರನು,
ಕನ್ನಡದಿ ಭಾರತವ ಬರೆದಿಹ ಆ ಕುಮಾರ ವ್ಯಾಸನು,
ನಿನ್ನ ಘನತೆಯ ಬೀರುತ,—ಇಂ-
ದಿನ್ನು ಮೆರೆವರು ಸಂತತ!

೬

ವಿಜಯನಗರವೆ! ನೈಜದಿಂದೆವೆದೆರೆದನಾ ಭಾಗ್ಯದ ರವಿ!
ವಿಜಯ—ವಿಭವದ ಹೆಮ್ಮೆ--ಹುಮ್ಮಸ ಮಿರುಗಿತಾ ಪ್ರಗತಿಚ್ಛವಿ!!
ಅಂದೆ ನೀ ಮುಂದೊತ್ತಿದೆ!— ಕಣ್-
ಮುಂದೆ ಮಿಗೆ ತಲೆಯೆತ್ತಿದೆ!!

೭

ಅಂದು ವಿಪುಲೈಶ್ವರ್ಯದಿಂದಲಿ ಜಗವ ವಿಸ್ಮಯಗೊಳಿಸಿದೆ;
ಮುಂದರಿದು, ನವ ನಾಗರೀಕತೆಯಿಂದ ಚೇತನಕೆಳಸಿದೆ
ಶಿಲೆಗಳಿಗೆ ರೂಪಿತ್ತಿಹೆ— ಸತ್-
ಕಲೆಗಳಲಿ ಕಳೆಯೇರಿಹೆ

೮

ಯಾರು ವಿಜಯದ ದಶಮಿಯಲಿ ಹೊಸ ಹುರುಪಿನಲಿ ಹೋರಹೊಮ್ಮುತ
ಸಾರಿ ಪರರಾಷ್ಟ್ರವನು, ಸಮರದಿ ವೀರ ವಿಜಯದೊಳುಬ್ಬುತ,
ಮೆರೆದರೋ ಆ ರಾಜರು— ಈ-
ಗಿರುವರೇ ನವ ತೇಜರು?

೯

ವೀರ ಹರಿಹರ-ಬುಕ್ಕ ನರಪತಿ-ಮಿರ ಕಂಪ ನೃಪಾಲಕ,
ಧೀರ ಕೃಷ್ಣ ಸುದೇವರಾಯನು-ಅಧಟಿನೆಚ್ಚಮನಾಯಕ
ಎಂದು ಮೊದಲಾದರಸರು—ಎ-
ಲ್ಲಿಂದಿಹರು ಬಹು ಸರಸರು?

೧೦

ಅಂದು ನಿನ್ನಲಿ ನೃಪರು ಮೆರೆದರು; ಅಂದು ರಾಣಿಯರೊಲಿದರು

ಅಂದು ಕವಿಗಳು ಕವನಕಟ್ಟಿದರಂದು ಗಾಯಕರುಲಿದರು

ವಾದಿಸಿದರಾ ವಾದಿಗಳ್.—ಮು-

ತ್ತೋದಿದರು ವರಗಮಕಿಗಳ್

೧೧

ಏನು ಹೇಳಲಿ? ವಿಜಯನಗರವೆ! ನಿನ್ನ ಪರಿಭವ ವಾರ್ತೆಯ,

ಮಾನಸವು ಮರುಗುವುದು—ಶತ್ರುಗಳಂದು ನುಗ್ಗುತ ನಿನ್ನೊಳು

ಪಟ್ಟಣವ ಪುಡಿಗೈದರು—ನಿ-

ನ್ನಟ್ಟಹಾಸವ ಹಿಳಿದರು

೧೨

*ತಾಳಿಕೋಟೆಯ ಕಾಳಗದ ಕಳದಲ್ಲಿ ನಿನ್ನ ಮಹತ್ವವ

ಸೀಳಿಬಿಟ್ಟನೆ ಕಾಲ ರಾಕ್ಷಸ?—ಕೊಳ್ಳುಗೊಂಡನೆ ಸತ್ವವ?

ಅಂದಿನಾ ದುಷ್ಕಾಲವು ?—ಆ-

ನಂದದಾ ಕೊನೆಗಾಲವು

೧೩

ಸತ್ಕಲಾಚಾರ್ಯರ ಪರಿಶ್ರಮದಿಂದಲೇಳಿಗೆವಡೆದಿಹ,

ಉತ್ಕಟಾಮಲ ದೈವ ಭಕ್ತಿಯ ಶಕ್ತಿಯಲಿ ಮೈವೆತ್ತಿಹ.

ಆ ಬೃಹದ್ವಿಗ್ರಹಗಳು—ಸಂ-

ಕ್ಷೋಭೆಯನು ಪಡೆದವುಗಳು

೧೪

ನಿನ್ನ ಕೀರ್ತಿಯ ವಿಜಯ ತೂರ್ಯವು ಅಂದು ಗಾನವ ನಿಲಿಸಿತೇ?

ನಿನ್ನ ಹೆಸರಿನ 'ವಿಜಯ' ಶಬ್ದದ ಮೊಗಕೆ ಅಪಜಯ ಕವಿಯಿತೇ

ಆ ಮಹಾ ಸಾಮ್ರಾಜ್ಯವು—ತ-

ನ್ನಾಮ ಮಾತ್ರದಿ ಶೇಷವು!

---

* ರಕ್ಕಸತಂಗಡಿ

### ೧೫

ಒಂದೆ ದಿನದಲಿ ನಿನ್ನ ಮಂಗಲ ತಿಲಕ ಹಣೆಯಿಂದಳಿಯಿತು
ಸುಂದರ ಸ್ವಾತಂತ್ರ್ಯ ಕೇತುವು ಮುರಿದು, ಮಳಲಲಿ ಮುರುಟಿತು !
ಆಶೆಯಾ ಕುಡಿ ಮುಗ್ಗಿತು—ಸಂ-
ತೋಷದಾ ಕಳೆ ಕುಗ್ಗಿತು

### ೧೬

ಕಾಲ ಚಕ್ರದ ಕಾಲಡಿಗೆ ನೀ ಬಿದ್ದು ಗಾಸಿಯ ಪಡೆದರೂ,
ಲೀಲೆಯಾ ನೋಟಗಳು ನಿನ್ನಲಿ ತುಂಬಿಹವು—ಅದನಾದರೂ
ಇಂದು ನೋಡುತ, ನೆನೆಯುವ—ನಾ-
ವಂದಿನಾ ಗತವೈಭವ !

೧೯೩೬

## ದ್ವಂದ್ವ

೧

ಒಂದು ಕಡೆ ಸಂತೋಷ-ಸುಖದ ಸಾಮ್ರಾಜ್ಯಮುಯು
ನಂದನ ಸ್ವರ್ಗದ ಸಮಾವೇಶವಿಹುದು
ಬೇರೊಂದು ಕಡೆ ಬೇನೆ-ಬೇಸರಿಕೆ-ಬಿಸುಸುಯ್ಲ-
ಳೇರಿರುವ ನಲವಿರದ ನರಕವಿಹುದು

೨

ಒಂದು ಕಡೆ ಮದುವೆ-ಮಾಸಿರಿ ಬೆಡಗು-ಬಿನ್ನಣಗ-
ಳೊಂದಿರುವ ಶೃಂಗಾರ ಸೌರಭ್ಯವಿಹುದು
ಬೇರೊಂದು ಕಡೆ ವಿರಸ ವಿರಹದುರಿಯುದ್ದಿರುವ
ನೈರಾಶ್ಯ-ಸಂತಾಪ ಸಂರೋಧವಿಹುದು

೩

ಒಂದೆಡೆ ಮನೋಹರ ಮೃದಂಗ ಸಂಗೀತ ಜಯ-
ದುಂದುಭಿಯ ಮಂಗಲ ಧ್ವಾನವಿಹುದು
ಬೇರೊಂದು ಕಡೆ ರೋದನದ ಕೇರುದಸಿ ಸುಯ್ಯ
ಮಾರುದ್ದ ನಿಟ್ಟುಸಿರ ನಾದವಿಹುದು

೪

ಒಂದು ಕಡೆ, ಕಿಲಕಿಲನೆ ನಗುತಿರುವ ಮೃದು ಹಸಿತ-
ದಿಂದಾದ ಮೆಲ್ಲುಲಿಯ ಬಿನದವಿಹುದು
ಬೇರೊಂದು ಕಡೆ ಮನವ ಮುಸುಕಿರುವ ಶೂನ್ಯತೆಯ
ಬೀರುತಿಹ ಚಿಂತಾನಲ ಜ್ವಾಲೆಯಿಹುದು

೫

ಒಂದು ಕಡೆ ಧನಿಕರಾಡಂಬರದ ಸಂರಂಭ-
ದೊಂದು ಮುದ-ಮುದಯುತ ವಿಲಾಸವಿಹುದು
ಬೇರೊಂದು ಕಡೆ ಬಡವರಾಸುವಾ ಹಸಿವಿಂದ
ಮೀರಿ ತೋರುವ ಬನ್ನ ಬಾಳ್ವೆಯಿಹುದು

೬

ಒಂದು ಕಡೆ ನಳನಳಿಸಿ, ನಲಿಯುತ್ತ, ಬೆಳೆಯುತ್ತ,
ಬಂದಿರುವ ಪಚ್ಚಪಸುರಿನ ಪೈರದಿಹುದು
ಬೇರೆ ಕಡೆ, ಬೆಂಗದಿರ ಬೀರುತಿಹ ಬಿಸಿಲಿಂದ
ಗಾರಾದ ನಿಷ್ಪ್ರಯೋಜನ ಭೂಮಿಯಿಹುದು

೭

ಒಂದು ಕಡೆ ಸುರಿಯುವೈಕಿಲ್ಸೋನೆಯಿಂ ಸೆಡೆದು.
ಸಿಂಪಿರದೆ ಗಡಗಡನೆ ನಡುಗುತಿರಬಹುದು
ಬೇರೊಂದು ಕಡೆ ಸೆಕೆಯ ಕಾವಿನೌಷ್ಣ್ಯವನಾನ-
ಲಾರದೇ ಸಂಕಟಂಬಡುತಲಿರಬಹುದು

೮

ಒಮ್ಮೆ ಸಮರದಿ ವೀರ–ವಿಜಯ ವಧು ಸಾಹಸದ
ಸಮ್ಮೋದದಿಂ ಸಾದರ್ದ ಸಿರಿಯನುಗಬಹುದು
ಮತ್ತೊಮ್ಮೆ ಹೇಡಿತನವಡಸಿರಲು, ಹಂದೆಗೊಲಿ—
ದತ್ತೈತರಲಾಪರ್ಳಪಜಯಾಂಗನೆಯು

೯

—ಇಂತೆಸೆವ ವಿಧವಿಧ ವಿರುದ್ಧ ವಿಜ್ಞಾನಗಳ-
ನಾಂತಿಹುದು ಸಂತತಂ ತಿರೆಯಂತರಂಗ
ಇವರ ಚೆಲುವನು ನೋಡಿ, ನಲವಾಂತು ವಿಶ್ವಪತಿ
ಪುದಿದ ಬಿನದದಿ ಮುಗುಳುನಗುತಲಿರಬಹುದು

೧೦

ಈ ದ್ವಂದ್ವಗಳಲೆಲ್ಲ ಸಾಮ್ಯವನ್ನಳವಡಿಸಿ,
ಸಾಧಿಸುತ, ಸಾಮರಸ್ಯವ ಸಂಧಿಸಿ,
ಯೋಗವನು ಯೋಜಿಪುದೆ, ಯೋಗಿಯೆಂದೆನಿಸುವುದೆ
ಯೋಗೇಶ್ವರಂ’ ಬೋಧಿಸಿದ ‘ಗೀತೆ’ ಯರಿವು

# ಮೋಹನ ಮುರಲಿ

ಶಾರದ ಚಂದ್ರನು ಬಾನಿನ ನೀಲಿಗೆ
ಬೆಳ್ನಗು ಹೂವನು ಮುಡಿಸಿಹನು.
ಪಧಿ ಧವಲಾಚ್ಛ ಜ್ಯೋತ್ಸ್ನಾ ಲಹರಿಯು
ಭೂಮಿಗೆ ಬರಿಸಿತು ಪುಲಕವನು

ಮಲಯ ಸಮೀರನು ಯಮುನಾ ಜಲದೊಡ-
ನಾಡುತ ತೀಡುತ ಬರುತಿಹನು
ವೃಂದಾವನದಲಿ ಧ್ಯಾನಾವಸ್ಥಿತ
ವೃಕ್ಷಗಳೋಳಿಯನೆಬ್ಬಿಸನು
ಸಂಧ್ಯಾ ಸುಮಗಳ ಮೋಹಕ ಸೌರಭ
ಗಾಳಿಗೆ ಗರಿಗಳ ನಿಮಿರಿಸಿತು
ರಾತ್ರಿಯು ಮೌನದ ಕಡಲಲಿ ಮುರಲಿಯು
ತಾನವು ತೆರೆಗಳ ತೇಲಿಸಿತು

ವನದಲಿ ಹರ್ಷೋನ್ಮತ್ತ ಕಿಶೋರ ಮ-
ನೋಹರ ಕೃಷ್ಣನು ವಿಹರಿಪನು
ಪ್ರಕೃತಿಯ ಸೌಂದರ್ಯಾಮೃತ ಸಾಗರ
ವೀಚಿಗಳೋಳಿಯೊಳಾಳುವನು

ಆವನ ಕರಾಗ್ರದಿ ಚೇತನವಿಲ್ಲದ
ವೇಣುವು ಜೀವವನಾಂತಿಹುದು
ತುಟಿಗಳ ಸೊಡೆಯನು ಹೀರುತ, ಮೆಲ್ಪಿಸ
ನಾದಸಮುದ್ರವನುಕ್ಕಿಪುದು

ಸವಿಗೊಳಲಿನ ಸರವೆಳೆಗೊಲ್ಲತಿಯರ
ಚಿತ್ತವ ಚಂಚಲವಾಗಿಸಿತು
ಹಾಸಿದ ಹಾಸಿಗೆಯನು ತನುವುಳಿಯಿತು
ಮನವಿಂಚರದಲಿ ಮುಳುಗಿತ್ತು

ಮುರಲೀ ನಾದಕೆ ತಾಳವನಿಕ್ಕುತ,
ಕಾಲ್ ಮುನ್ನಡೆಯಿತು ವನದೆಡೆಗೆ
ಕೊಳಲುಲಿಯುವರನು ಸೆಳೆಯಿತು, ತಂದಿತು
ಲೀಲಾ ಗೋಪಾಲಕನೆಡೆಗೆ

ಬಿಡುಜಡೆಯೊಳಲುವ ಕಾಂತಿಯ ಕಣ್ಗಳ
ಕೆಂಪಿನ ಕೆನ್ನೆಯ ಕನ್ನೆಯರು
ಮುಕುಲಸ್ತನಗಳ ನಳಿತೋಳ್ಬಳ್ಳಿಯ
ಕಿರುನಡುನೆರಸಿದ ಚೆನ್ನೆಯರು

ಓಡುತ ಹಾರುತ ನಲಿಯುತ ನೆಗೆಯುತ,
ತಮ್ಮನು ತಾವೇ ಮರೆಯುತ್ತ,
ಕುಣಿಯುತ, ಮಣಿಯುತ, ಬಂದರು ನಿಂದರು
ನಂದ ಕುಮಾರನ ಬಳಸುತ್ತ

ನೂತನ ಜಲಧರ ನೀಲ ಶರೀರನು
ಪೀತಾಂಬರವನ್ನುಟ್ಟವನು,
ಕುಟಿಲಾಲಕ ಚಯ ಚಿತ್ರಿತ ಫಾಲನು
ಮುಗ್ಧ ಸ್ನಿಗ್ಧಾಂಬಕಯುತನು;

ಚಂಚಲ ಕುಂಡಲ ಮಂಡಿತ ಗಂಡ-
ಸ್ಥಲ ಯುಗ ಸಂಶೋಭಿತ ಮುಖನು,
ನವಿಲಿನ ಗರಿಯ ಕಿರೀಟವನಾಂತಿಹ
ವನಮಾಲಿಯು ನಡು ನಿಂದಿಹನು

ಸಪ್ತ ಸ್ವರದಲಿ ವಿಧ ವಿಧ ರಾಗವ
ಸಿರಿಗೊಳಲಿನ ಮುಖ ಸೂಸಿತ್ತು
ಕಾಳಿಂದಿಯು ಹೊನಲಿಡುವುದ ಮರೆಯುತ,
ಆಲಿಸುತಂತೆಯೆ ನಿಂದತ್ತು

ಪಶು ಮೃಗ ಗಣಗಳು ತಮ್ಮೊಡೆಯನು ತೆರೆ-
ದಿಂಚರವನು ಮೊಗೆದೀಂಟಿದುವು
ಮರಗಳು ಎಲೆಗಿವಿಗಳನುರೆ ನಿಮಿರಿಸಿ,
ಗೀತಾಮೃತದಲಿ ಮುಳುಗಿದುವು

ಜಡ ಪ್ರಕೃತಿಯು ಚೈತನ್ಯವನಾನುತ.
ಗಾನಾನಂದದಿ ಜಿಗಿದತ್ತು
ಗೋಪೀವೃಂದವು ಶ್ರೀ ಕೃಷ್ಣಾತ್ಮದೊ-
ಳೈಕ್ಯಾಮರತೆಯ ಗಳಿಸಿತ್ತು

೧೯೪೩

# ಪತ್ರಿಕೆ

ಜನ ಜೀವನಾಬ್ಧಿಯಲಿ ಮಸಗುತಿಹ ವೈಚಿತ್ರ್ಯ
ಪೂರ್ಣವಿಹ ಘಟನಾ ತರಂಗ ಸಂಘಗಳನ್ನು
ಸಂಘಟೀಕರಿಸಿ, ರೇಖಿಸಿ ಚಿತ್ರಿಸುತ್ತಿಹುದು
ಪತ್ರಿಕೆಯು ! ಕಾಲ ಪದ ತಾಡನದ ಘರ್ಷಣದಿ
ಚಾರಿತ್ರ ಸಂತತಿಯ ಸಂಗತಿಯು ಮಾಸದಿಹ
ರೀತಿಯಲಿ ತನ್ನ ವಿಪುಲೋದರದಿ ರೇಖಿಸಿ
ಸಂಚಯಂ ಗೊಳಿಸುತಿದೆ. ಯಾಂತ್ರಿಕದ ಪಾಂಗಿನಲಿ
ಸಾಗುತಿಹ ಬಾಳ್ಗೀವುದುತ್ಸಾಹ ವರ್ಷವನು.

ದಿನ ದಿನಂ ಪಲ್ಲಟಂಗೊಂಡು ಪ್ರಗತಿಯೊಳೋಟ-
ವೋಡುವ ವಿಶಾಲ ವಿಶ್ವದ ವೃತ್ತ ವಾಹಿನಿಯ-
ಸರಿಯಲ್ಕೆ ಸಹಕಾರಕಾರಿಯಿದು; ಅವನತಿಯ
ಮಾರ್ಗವನ್ನುಳಿಯೆ ಸಾಹ್ಯವನೆಸಗುವುದು ಸತತ.

ಸರ್ವ ವಿಧ ಮಾನವರ ವರ್ಗಕ್ಕೆ ಪತ್ರಿಕೆಯು
ಮಾನಸೋಲ್ಲಾಸ ಸಂಜೀವನದ ಚಿತ್ರಿಕೆಯು !

೧೯೪೪

## ಕುಚೇಲ!

### ಭಾಮಿನಿ

ಶ್ರೀ ರಮಾ ರಮಣೈಕ ಭಕ್ತನೆ!
ಚಾರು ಚರಿತ! ಕುಚೇಲ! ನಿನ್ನಯ-
ಸಾರ ಗುಣ ಗಣ ಯುಕ್ತ ಭಕ್ತಿಯ-
ನೆಂತು ಬಣ್ಣಿಪೆನು?
ವಾರಿಜೋದರ ದೇಹದಾ ನಿಜ
ಸಾರದಾಲಿಂಗನೆಯನಾಂತಿಹ
ಚಾರು ಸುಮನೋಹರ ಶರೀರವ-
ನೆಂತು ಚಿತ್ರಿಪೆನು? ೧

ಸಾದರದಿ ನೀನೆಲೆ ಸುದಾಮನೆ!
ಮಾಧವನ ಭವನಾಂತರಾಲದಿ
ಹೋದ ಹೊತ್ತಿನ ಗಣನೆಯಿಲ್ಲದೆ,
ಹರಿಯ ಸರಿಸದಲಿ
ಮೋದದಲಿ ಮಾತಾಡುತಾಡುತ,
ಸೋದರರ ತೆರದಲ್ಲಿ ವಿಹರಿಸಿ,
ಸಾಧಿಸಿದ ಚಿತ್ರವದು ಮಾಸದು
ಹೃದಯ ಭಿತ್ತಿಯಲಿ. ೨

ಬಡತನದ ಕಡು ದುಗುಡದಿಂದಲಿ
ಸೆಡೆದು ಬಡವಾಗಿರುವ ಒಡಲದು
ಸಡಗರದಿ ಮಾಧವನು ಕೋಮಲ
ಮಸೃಣ ಕರತಳದಿ
ಕೊಡುವ ಅಂಗಸ್ಪರ್ಶ ಸುಖದಲಿ
ಪಡೆಯದೇ ರೋಮಾಂಚವನು ತಾ-
ನಡಿಗಡಿಗೆ ಪೇಳೀಗ ಭಕ್ತ ಸು-
ದಾಮ! ನನ್ನೊಡನೆ. ೩

ಕೆಲವು ಮನೆಯನು ತಿರಿದು ತಂದಿಹ,
ಅಳಿಲ ಸೇವೆಯ ಮಳಲಿನಂತಿಹ,
ಒಲುಮೆಯೊಲವಿನ ಕಾಣಿಕೆಯನವ-
ಲಕ್ಕಿಯನು ಮುದದಿ
ಲಲನೆಯಾ ' ಕ್ಷುತ್ ಕ್ಷಾಮೆ ' ಯಿತ್ತಳು
ಸಲಿಗೆಯಲಿ ನಿನಗೆಂದು, ಕೃಷ್ಣನ
ಲಲಿತ ಸಂದರ್ಶನದಿ ಕಾಣಿಕೆ-
ಗೊಡಲು ಭಕ್ತಿಯಲಿ. ೪

ಅದನು ಹೆದರುತ ತಂದು, ಕೃಷ್ಣನ
ಪದತಲದೊಳರ್ಪಿಸದೆ, ಸುಮ್ಮನೆ
ಒದವಿದಾ ಸಂಕೋಚ ಭಾವದಿ
ಬಾಗಿ ನಿಂದಿರಲು,
ಸದಯ ಹೃದಯನು ಮಾಧವನು ನಿಜ
ಸದಮಲಾಂತಃಕರಣದಿಂದಲಿ
ಸೊದೆಯ ಸುರಿಸುವ ಸರಸ ವಚನವ-
ನಿಂತು ಪೇಳಿದನು :— ೫

"ಸಾಕು ಮನದನುತಾಪ, ಮಿತ್ರನೆ !
ಈ ಕಡೆಗೆ ನೀಡೆನಗೆ, ಮನದಲಿ
ಕಾಕು ಬುದ್ಧಿಯ ಬಿಟ್ಟು, ಭಕ್ತಿಯ
ಕಾಣ್ಕೆಯನ್ನೀಗ.
ಏಕೆ ಸಂಶಯ ? ಭಕ್ತ ಜನರು ವಿ-
ವೇಕದಿಂದಲಿ ಕೊಟ್ಟ ಪತ್ರವು,
ಆ ಕುಸುಮ, ಫಲ, ತೋಯ ತೃಪ್ತಿಯ-
ನೆಸಗುವುದು ನನಗೆ. ೬

"ಧನಿಕರರ್ಪಿಪ ವಿವಿಧ ವಸ್ತುಗ-
ಳನಿತರೊಳು ನನಗಿರದು ತೃಪ್ತಿಯು;
ಜನಕೆ ತೋರಿಪ ಹೊರಗಿನಾಡಂ-
ಬರದಿ ಫಲವೇನು ?
ಮನವೊಲಿದು ಸಂಸ್ತುತಿಸಿ, ಸುರಿಯಿಪ
ಮನವ ಕರಗಿಪ ನಯನ ವಾರಿಯು
ನನಗೆ ಮನೆಯದು. ಭಕ್ತರಿಗೆ ನಾ-
ನೊಲಿವೆ; ಸತ್ಯವಿದು !" ೭

ಎಂದ ಮಾತನು ಕೇಳುತತ್ಯಾ-
ನಂದದಲಿ ನೀನಂದು ಶ್ರೀಗೋ-
ವಿಂದನಡಿದಾವರೆಗೆ ಪೊಡಮಡು-
ತಧಿಕ ಭಕ್ತಿಯಲಿ,
"ಇಂದಿರಾ ಮಂದಿರನೆ ! ಭಕ್ತರ
ಬಂಧು ನೀಡುವೆ ನಿನಗೆ ನಾನಿಂ-
ದಂದದಲಿಯವಲಕ್ಕಿ ಬಡವನ
ಭಕ್ತಿ ಕಾಣಿಕೆಯ. ೮

"ಒಂದಿ ನೀನಿದರನ್ನು, ನನ್ನನು
ಮುಂದೆ ಕೃಪೆಯಲಿ ಸಲಹು. ಬೇಡುವೆ,"
ನೆಂದು ಕಂಠದೊಳುಣ್ಮೆ ಗದ್ಗದ
ದನಿಯು, ನಯನದಲಿ
ಸಂದಿರಲು ಸಂತಸದ ಕಂಬನಿ,
ಸಿಂದಿರಲು ರೋಮಾಂಚ ದೇಹದಿ,
ಮುಂದೆಯವಲಕ್ಕಿಯನು ಬಿಚ್ಚಿದೆ.
ಧನ್ಯ ನೀನಿಂದು ! ೯

# ಉಮರ ಸಂದೇಶ*

೧

ನಶ್ವರವು ಜಗದಲ್ಲಿ ನರನ ಬಾಳದರಿಂದ
ಇರುವಲ್ಪದಿನಗಳಲಿ ವ್ಯಥೆ-ಚಿಂತೆಯೇಕೆ ?
ಮೃತ್ಯುವೊಂದತಿಸತ್ಯವಾಗಿರಲು ನಾವಿಂದು
ಸುಖ ಹೀರಬೇಕು; ನಾಳೆಯನೆಣಿಸಬೇಕೇ ?

೨

ಸತ್ತ ಮೇಲೇನೆಂದು ತಿಳಿದವರು ಯಾರಿಲ್ಲ.
ಎಷ್ಟೋ ಜನ ಹೋಗಿಹರು, ಬಂದವರ ಕಾಣೆ.
ಸೊಗವಡುವುದೇ ನಾಕವಳಲುವುದೆ ದಿಟ ನರಕ.
ಸತ್ತ ಮೇಲೆಲ್ಲರೂ ಒಂದು ಹಿಡಿ ಮಣ್ಣೇ.

೩

ವಿಧಿಯದೃಷ್ಟದ ಬಲುಮೆ ನರನ ಕುಣಿಸುವುದಿಲ್ಲಿ.
ಬಂದುದನ್ನನುಭವಿಸಬೇಕು. ಕೊರಗುವುದೇ ?
ಹಿರಿಯಾಸೆ ಬೇಡ, ಮಿತ ಸರಳತೆಯೆ ಸಾಕೆಮಗೆ.
ಇಹ ಸುಖವು ಶೂನ್ಯವೆನೆ ಪರವು ದಿಟವಿಹುದೇ ?

೪

ಪ್ರೇಮವೆಂಬುದೆ ಮುಖ್ಯ, ದ್ರಾಕ್ಷಾಸವವೆ ಸೌಖ್ಯ,
ನಲ್ಲೆಯುಗುರಿನ ಸಿತಾರದ ಮಿಡಿತದಿಂಪು,
ಮನವನ್ನೆ ತುಟಿಯೊತ್ತು, ನಲ್ಗಬ್ಬ ಬಳಿಯಿರವು,
ಇಷ್ಟಿರಲು ರೊಟ್ಟಿಯಿರೆ ಅದೆ ಸಗ್ಗ ಸೊಂಪು

೫

ಸತ್ಯವಾವುದೊ ಏನೊ, ಒಬ್ಬೊಬ್ಬರೊಂದೊಂದು
ನುಡಿಯುವರು: ಹೇಳಿಕೆಯೊಳಿಲ್ಲವೊಮ್ಮತವು
ಆಯುಸ್ಸು ಮಿತವಿಹುದು, ಚಿಂತೆಯು ಮಿತವದಿರಲು
ಬೇಕು ದೊರೆತಷ್ಟು ಸುಖವುಲ್ಲಾಸದಿರವು

೬

ಪುಣ್ಯವೋ ಪಾಪವೋ ಮಸಣದೊಳಗೊಂದೆ ತೆರ
ನಮ್ಮ ಮೈ ಮಣ್ಣಾಗಿ ಘಟವಾಗಬಹುದು.
ಇಂದು ಮನವನು ಸೂರೆಗೊಂಡ ಸೊಬಗೇ ನಾಳೆ
ದೂಳಿನಲಿ ದೂಳಾಗಿ, ತಿರುಗಿ ಹೂವಹುದು.

೭

ಎಷ್ಟು ಸುಖ ಪಡೆದಷ್ಟು ಲಾಭವೇ ನಮಗಹುದು.
ನಶ್ವರದ ಲೋಕದಲಿ ತಡದಿರವು ಸಲ್ಲ
ಬಾ ಹೀರು ಮಧುವನ್ನು ತಡವೇಕೆ ? ತಡೆಯೇಕೆ ?
ಉಮರ ಸಂದೇಶವಿದು. ಆಲಿಸೀ ಸೊಲ್ಲ

೧೯೪೫

# ಸರಸತಿ!

ಅರಳಿದ ತಾವರೆಯಲರುಗಳಿರುವ
ವರ ಸರ ತಟದಲಿ, ಕಲ್ಲಿನಲಿ,
ಕರದಲಿ ವೀಣೆಯು ಸರಗೊಡುತಿರಲು,
ಸರಸತಿ ! ಮಂಡಿಸಿ ಏಂ ಗೈವೆ ?

ಏರು ಬಸಂತನ ಬೀಟವ ನೋಳ್ಪೆಯೊ ?
ನೀರಜಕೆರಗುವ ಪರಮೆಗಳ
ಸಾರ-ಸುಮಧುರ ಸುಗೀತವ ನೀನು
ಹೀರುತಲಿಹೆಯೋ ಕಿವಿಯಿಂದ ?

ಬಳಿಯಲಿ ನುಡಿಯುವ ಗಿಳಿಗಳ ಸರಕೆ,
ಉಲಿಯುವ ಪಿಕಗಳ ಇಂಚರಕೆ,
ತಲೆಯಲ್ಲಾಡಿಸಿ, ತಾಳವನಿಕ್ಕುತ,
ಒಲಿದಿಹೆಯೇನೋ ಶಾರದೆಯೆ ?

ಆರನು ನೋಡುವೆ ಎಡೆ ಬಿಡದಿಂತು ?
ಆರನು ನೋಡುತ ನಗುತಿರುವೆ ?
ಹಾರದೆ ಮೇಲಕೆ, ನೀರೊಳು ತೇಲುವ
ಚಾರು ಮರಾಲವನೀಕ್ಷಿಪೆಯೊ ?

ತಿಳಿಯಿತು! ತಿಳಿಯಿತು! ನಿನ್ನಯ ಬಗೆಯು:—
ಸಲಿಲದ ಕಮಲದಿ ನಿಂತಿರುವ
ಲಲಿತಾ ಲಕ್ಷ್ಮಿಯ ನೋಡುತ, ಬಳಿಕ
ಮೆಲುನಗೆ ಬೀರುವೆ ಮೊಗದೊಳಗೆ.

ಸರಸತಿ ! ನಿನ್ನಯ ಕುಡಿಗಣ್ಣೋಟ
ಕಿರುನಗೆ ತೋರ್ಪುದವಜ್ಞೆಯನು:—
ಸರಿಸದಿ ಸರಸಿಜದಲರಲಿ ಚಲಿಸದೆ
ಮೆರೆಯುವ ಸಿರಿ ರಾಣಿಯ ಕುರಿತು.

"ತಾನು ಪತಿವ್ರತೆ;— ಒಬ್ಬಗೆ ಒಲಿದರೆ
ಏನವನನು ನಾ ತೊರೆಯುವೆನೆ ?
ಕಾಣಿರಿ ಲಕ್ಷ್ಮಿಯ ಚಂಚಲ ಚಿತ್ತವ;—
ಮಾನಿಪಳಾರನು ಸ್ಥಿರವಾಗಿ ? "
ಎಂದಪಹಾಸವ ವ್ಯಂಜಿಸುತಿಹೆಯೊ—
ಸುಂದರಿ ! ಕಿರುನಗೆ ರೂಪದಲಿ ?

* * * *

"ಇಂದಿರೆ ವಾಸಿಪ ತಾಯ್ಮನೆ ತಾವರೆ-
ಯಂದವನೆಲ್ಲರು ದಿಟ್ಟಿಸಿರಿ:—
"ಅವಳಾ ಚಂಚಲ ವರ್ತನೆಯನು ತಾ-
ನವನೀತಲಕದು ನುಡಿವಂತೆ,
ದಿವಸವದೊಂದರೊಳಲರುತ, ಮುಗುಳುತ,
ತವೆ ತೋರ್ಪುದು ಬಹುರೂಪವನು.
"ನನ್ನಾಸನವದು ಕರಿಕಲ್ಲಾದರು,
ನುಣ್ಣಗೆಯಿಹುದತಿ ಸ್ಥಿರವಾಗಿ
ಕಣ್ಣಿಗನುತ್ತಮವಾದರು, ಪಾಸರೆ
ಭಿನ್ನವದಾಗದು!— ಪ್ರಕೃತಿಯಿದು.
"ಆವುದು ಸ್ಥಿರವದು ?– ಕಲ್ಲೋ ಕಮಲವೊ
ನೀವೇ ಹೇಳಿರಿ" ಎಂಬಂತೆ
ನವನಿಸಿ ನಲ್ಮೊಗದಲಿ ದರಹಾಸವ-
ನವಲೋಕಿಪೆಯೇನಿಂದಿರೆಯ ?
ಎಲ್ಲರಪೇಕ್ಷಿಪ ಧನದಧಿ ದೇವಿಯು
ಫಲ್ಲಾಕ್ಷನ ನಚ್ಚಿನ ಮಡದಿ
ಕಾಲಿಡೆ ನಿಂತಿಹಳಿಲೆ ಸರಸತಿಯೆ !
ಮೇಲೆನಿಪರದಾರ್ ನಿನ್ನಿಂದೆ:
ವಾಣಿಯೆ ! ನಿನ್ನಯ ವೀಣೆಯ ಸುಸ್ವರ
ಗಾನವನಾಲಿಪ ನವಿಲಾಗಿ
ತನ್ನೆದೆಯರಿವನು ಸಂತಸದಿಂದಲಿ
ಧನ್ಯವದಾಗಿಸೆ ಬಯಸದರಾರ್ ?

# ಉಮರ ಸಂದೇಶ*

೧

ನಶ್ವರವು ಜಗದಲ್ಲಿ ನರನ ಬಾಳದರಿಂದ
ಇರುವಲ್ಪದಿನಗಳಲಿ ವ್ಯಥೆ-ಚಿಂತೆಯೇಕೆ ?
ಮೃತ್ಯುವೊಂದತಿಸತ್ಯವಾಗಿರಲು ನಾವಿಂದು
ಸುಖ ಹೀರಬೇಕು; ನಾಳೆಯನೆಣಿಸಬೇಕೇ ?

೨

ಸತ್ತ ಮೇಲೇನೆಂದು ತಿಳಿದವರು ಯಾರಿಲ್ಲ.
ಎಷ್ಟೋ ಜನ ಹೋಗಿಹರು, ಬಂದವರ ಕಾಣೆ.
ಸೊಗವಡುವುದೇ ನಾಕವಳಲುವುದೆ ದಿಟ ನರಕ.
ಸತ್ತ ಮೇಲೆಲ್ಲರೂ ಒಂದು ಹಿಡಿ ಮಣ್ಣೇ.

೩

ವಿಧಿಯದೃಷ್ಟದ ಬಲುಮೆ ನರನ ಕುಣಿಸುವುದಿಲ್ಲಿ.
ಬಂದುದನ್ನನುಭವಿಸಬೇಕು. ಕೊರಗುವುದೇ ?
ಹಿರಿಯಾಸೆ ಬೇಡ, ಮಿತ ಸರಳತೆಯೆ ಸಾಕೆಮಗೆ.
ಇಹ ಸುಖವು ಶೂನ್ಯವೆನೆ ಪರವು ದಿಟವಿಹುದೇ ?

೪

ಪ್ರೇಮವೆಂಬುದೆ ಮುಖ್ಯ, ದ್ರಾಕ್ಷಾಸವವೆ ಸೌಖ್ಯ,
ನಲ್ಲೆಯುಗುರಿನ ಸಿತಾರದ ಮಿಡಿತದಿಂಪು,
ಮನವನ್ನೆ ತುಟಿಯೊತ್ತು, ನಲ್ಗಬ್ಬ ಬಳಿಯಿರವು,
ಇಷ್ಟಿರಲು ರೊಟ್ಟಿಯಿರೆ ಅದೆ ಸಗ್ಗ ಸೊಂಪು

೫

ಸತ್ಯವಾವುದೊ ಏನೊ, ಒಬ್ಬೊಬ್ಬರೊಂದೊಂದು
ನುಡಿಯುವರು: ಹೇಳಿಕೆಯೊಳಿಲ್ಲವೊಮ್ಮತವು
ಆಯುಸ್ಸು ಮಿತವಿಹುದು, ಚಿಂತೆಯು ಮಿತವದಿರಲು
ಬೇಕು ದೊರೆತಷ್ಟು ಸುಖವುಲ್ಲಾಸದಿರವು

೬

ಪುಣ್ಯವೋ ಪಾಪವೋ ಮಸಣದೊಳಗೊಂದೆ ತೆರ
ನಮ್ಮ ಮೈ ಮಣ್ಣಾಗಿ ಘಟವಾಗಬಹುದು.
ಇಂದು ಮನವನು ಸೂರೆಗೊಂಡ ಸೊಬಗೇ ನಾಳೆ
ದೂಳಿನಲಿ ದೂಳಾಗಿ, ತಿರುಗಿ ಹೂವಹುದು.

೭

ಎಷ್ಟು ಸುಖ ಪಡೆದಷ್ಟು ಲಾಭವೇ ನಮಗಹುದು.
ನಶ್ವರದ ಲೋಕದಲಿ ತಡದಿರವು ಸಲ್ಲ
ಬಾ ಹೀರು ಮಧುವನ್ನು ತಡವೇಕೆ ? ತಡೆಯೇಕೆ ?
ಉಮರ ಸಂದೇಶವಿದು. ಆಲಿಸೀ ಸೊಲ್ಲ

೧೯೪೫

# ಕೊಳಲ ಕೃಷ್ಣ

೧

ಬಳಿಯ ಮರದ ತಲದಿ ನೀಲ ಕಾಯ ಕೃಷ್ಣನು
ಕೊಳಲ ಕರದಿ ಪಿಡಿದು ನಿಂತು ಮತ್ತ ನೋಳ್ಪನು
ಪಶ್ಚಿಮದ ದಿಗಂತದಲ್ಲಿ,
ರವಿಯು ಕಡಲ ಸೇರುವಲ್ಲಿ

೨

ತನ್ನ ನೀಲಸಿಣಿಕೆ ನೋಡಿ ಇಳಿಯುತಿದ್ದನು
ರವಿಯು, ತನ್ನ ಶುದ್ಧವಾದ ಮಿಸುನಿ ಬಣ್ಣದ
ಕದಿರಿನಿಂದ ಹರಿಯ ಮೈಯೊಳಿರುವ ವಸನದ
ಪೊಳೆವ ಪೀತ ವರ್ಣವನ್ನು
ಹೆಚ್ಚು ಬೆಳಗಿಸುತಲಿ, ಇನ್ನು
ಸರಿಯುತಿದ್ದನಾಗ ತಾಳಿಯಧಿಕ ರಾಗವ

೩

ಕೊಳಲ ಕೃಷ್ಣನಿನಿಸು ಹೊತ್ತು ಹೊಳೆವ ಸೂರ್ಯನ
ಚೆಲುವ ನೋಡಿ, ಮುದವ ತಾಳಿ, 'ತನ್ನ ಕೊಳಲಿನ
ದನಿಯ ಕೇಳಿ ದೂರದಲ್ಲಿ
ಗುಡ್ಡ-ಬೆಟ್ಟ ತಪ್ಪಲಲ್ಲಿ
ಮೇಯುತಿರುವ ದನಗಳೆಲ್ಲ ಬರಲಿ' ಎನ್ನುತ,—

೪

ನೆನೆದು ತನ್ನ ಮುರಲಿಯನ್ನು ತುಟಿಯೊಳಿರಿಸುತ,
ಬಾಜಿಸಿದನು. ಒಡನೆ ಕರುವ ಕರೆದು ಕೂಡುತ,
ತುರುಗಳೆಲ್ಲ ಸರಿದು ಬಂದು,
ಹರಿಯ ಬಳಸಿ ನೆರೆದುವಂದು;
ಗಾನ ಸುಧೆಯ ಸವಿದು, ಶಾಂತಿಸುಖವನಾಂತವು

೫

ಪ್ರಕೃತಿ ದೇವಿ ಮೌನದಿಂದ ಕೊಳಲ ಸರವನು
ಆಲಿಸುತ್ತಲಿದ್ದಳಂದು ತಾಳಿಯೊಲವನು.
ನಾವು ಕೂಡ ಕೃಷ್ಣನೊರೆದ
'ಗೀತೆ' ಯನ್ನು ಕೇಳಿ, ಸೊಗವ
ನೆಲೆಯನರಿತು, ನಿತ್ಯ ತೃಪ್ತರಾಗಿ ಬಾಳುವ !

೧೯೩೪

# ಇವನಾರೆ ?

## ಪರಿವರ್ಧಿನಿ

೧

ಎಂದಾಗುವುದೋ ಧರ್ಮಗ್ಲಾನಿಯು,
ಮುಂದಾಗುವುದೆಂದೋ ದುರ್ನೀತಿಯು,
ಅಂದೇ ತಪ್ಪದೆ ತಾನವತಾರವ-
ನೆಸಗುವನಿವನಾರೇ ?
ಸಂದಾ ದುಷ್ಕರ ಭಾರವ ಸಹಿಸದೆ,
ಬಂದಡಿವಿಡಿದಿಹ ಭೂವನಿತೆಯ ಬಗೆ-
ವಂದುಗವಟ್ಟಲು ಮಾನಿಸವುಟ್ಟೊಳು
ಪುಟ್ಟಿದನಿವನಾರೇ ?

೨

ಶಯ್ಯಾ ಶೇಷನ ದಿಟ್ಟಿಸಿ, 'ನೀನೀ-
ಗೊಯ್ಯನೆ ರೋಹಿಣಿಯುದರದಿ ಜನಿಸುತ,
ರಯ್ಯಂ ಮಿಗೆ ಬಲರಾಮಾಕಾರದೊ-
ಳಗ್ರಜನೆನಗಾಗು '
ಒಯ್ಯಾರದೊಳಿಹ ಮಾಮಾಯೆಯನಾ-
ರಯ್ಯುತ. 'ನಂದಜೆಯಾಗುತ, ಮುಂ ಸಾ-
ಹಾಯ್ಯವನೆನಗೆಸಗಲು ಜನಿಸೆನ್ನುವ
ಸೂತ್ರಕನಿವನಾರೇ ?

೩

ಬಂಧನ ಗೃಹದಲಿ, ಕತ್ತಲೆ ಕೋಣೆಯು
ಸಂದಿನೊಳಿರುತಿಹ ಮಾತೆಯ ಬಳಿಯಲಿ,
ಸುಂದರ ಕಾಯದ ಪೊಳಸಿನ ಕದಿರುಗ-
ಳೆತ್ತಲು ಪಸರಿಸಿರೆ,
ಅಂದದೊಳಾಯುಧವಿಡಿದಿಹ ನಾಲ್ದೋ-
ಳೊಂದಿದ ಬಂಧುರದಾಕೃತಿಯೊಪ್ಪಿರೆ,
ಮುಂದಿಹ ಜನನೀ-ಜನಕರೊಳಂದದಿ
ಭಾಷಿಪನಿವನಾರೇ ?

೪

"ತಂದೆಯೆ ! ತಾಯಿಯೆ ! ನಿಮ್ಮನು ಸುಮ್ಮನೆ
ಬಂಧನವೊಂದಿಸಿ, ಮುಂ ಪುಟ್ಟಿದ ಶಿಶು
ವೃಂದಮನೆಲ್ಲವ ಕಲ್ಲೆದೆಯಿಂ ಕ-
ಗ್ಗಲ್ಲಿಗೆ ಸಲ್ಲಿಸುತ,
ಕೊಂದಿಹ ಮೂಢ ನೃಶಂಸನ ಕಂಸನ
ಸಂದೆಯವಿಲ್ಲದೆ, ಶಮನನ ಸದನ-
ಕ್ಕೊಂದಿಪೆ" ನೆನ್ನುತ, ಮಂಗಜ್ಜವನೊರೆ-
ದರಿಪಿದನಿವನಾರೇ ?

೫

ಶ್ರಾವಣ ಮಾಸದೊಳಷ್ಟಮಿ ಯಾಮಿನಿ
ತೀವಿರೆ ಬುವಿಯನು, ಕಾರ್ಗಾಲದ ಸರಿ-
ಯಾವರಿಸಲ್, ವಸುದೇವನ ಕೈಯ್ದಾ-
ವರೆಯಲ್ಲಿವನಾರೇ ?
ಈ ವಿಧ ಕಷ್ಟವನಟ್ಟಲು. ದೇವನ
ಭಾವಕ್ಕನುಗತನಾಗುತ ಬಂದಿಹ,
ಹಾವೆರೆಯನ ಹೆಡೆ ಕೂಡೆ, ಮಣಿ ದೀವಿಗೆ-
ಯಾದವನಿವನಾರೇ ?

೬

ಯಮುನೆಯು ದಾರಿಯ ಬಿಟ್ಟಿರೆ, ಮಧ್ಯದಿ
ಗಮಿಸುವ ಜನಕನ ಕೈಯಲಿ ಮಲಗಿಹ,
ಘನ ಕೋಮಲ ಪರಕಾಯದೊಳೊಪ್ಪುವ
ನವಶಿಶುವಿವನಾರೇ?
ಮಮತೆಯ ನಂದ-ಯಶೋದಾ ಕಂದನು
ಸಮಾನಿಸೆ ತಾನತಿ ಮುದದಲಿ ಬಳೆಯುತ-
ಲಮರಲು ಗೋವಳರವರಾ ಮಡಿಲಿನೊ-
ಳಾಡುವನಿವನಾರೇ?

೭

'ಜೋ ಜೋ ಹರಿಗೋವಿಂದನೆ! ಕಂದನೆ!
ಜೋ ಜೋ ಕರಿ ಸಿರಿ ನ್ಯೈಯನೆ! ಚೆಲುವನೆ!
ಜೋ ಜೋ ಗೋಕುಲ ಗೋಪಾನಂದಕ!
ಕೃಷ್ಣನೆ! ಜೋ' ಯೆನುತ,
ಸಾಜದೆ ಗೋಪಿಕೆಯರು ಸಂತೋಷದಿ
ಮೆಲ್ಲೋಗುಳವನು ಪಾಡಲು ತೊಟ್ಟಿಲೊ-
ಳೋಜೆಯೊಳೊರಗುತ ಕಿವಿಗಳ ನಿಮಿರಿಸಿ,
ಪಟ್ಟಿಹನಿವನಾರೇ?

೮

ಭೀಕರ ಕಾಯದ ರಕ್ಕಸಿಯೊರಗಿರ-
ಲಾಕೆಯ ವಕ್ಷಸ್ಥಲದಲಿ ಹೊರಳುತ-
ಲಾ ಕುಚವೆರಡರ ಹೀರುತಲಸುವನು
ಹಿಂಡಿದನಿವನಾರೇ?
ಆ ಕಂಸನ ಮತದಿಂದೈತಂದಿಹ
ಆಕುಲ ಶಕಟಾಸುರನನು ಕಾಲಿಂ-
ದಾಕುತಲುರುಳಿಸಿ, ಕೆಡೆ ಬೀಳಿಸಿ, ಮಡು-
ಹಿದ ಮಗುವಿವನಾರೇ?

೯

'ಈ ಕೃಷ್ಣನ ವಧಿಸುತ, ಹೆಸರಳಿಯಿಸ-
ಬೇಕೆಂ' ದಾಗಲೆ ಸುಳಿಗಾಳಿಯು ತೆರ-
ದಾಕೃತಿಯಾಂತ ತೃಣಾವರ್ತನ ಕ-
ತ್ತೊತ್ತಿದನಿವನಾರೇ ?
ಲೋಕವ ಹಿಂಸಿಸಲೈತಹ ದನುಜರ-
ನೇಕರ ತನ್ನಯ ಬಾಲಕ ಲೀಲಾ-
ನೀಕದಿ ನಾಶಿಸಿ, ತಿರೆಹೊರೆಯಿಳುಹಿದ
ಚಿಕ್ಕವನಿವನಾರೇ ?

೧೦

ತಾಯಿಯು ಹೆದರಿಸಿ, 'ಮಣ್ಣನು ಮೆದ್ದಿಹೆ
ಬಾಯನು ಬಿಚ್ಚೆ' ನೆ ತೆರೆಯಲು, ಆದರೊಳ-
ಗಾಯತ ಲೋಕವ ಕಾಣಿಸಿ. ವಿಸ್ಮಯ-
ಗೊಳಿಸಿದನಿವನಾರೇ ?
ತಾಯಿಗೆ ಮನೆಯಲಿ ಕೆಲಸವನೆಸಗಲ-
ದೀಯದೆ ಕೆಣಕಲು, 'ಹಗ್ಗದಿ ಕಟ್ಟುತ
ನೋಯಿಪೆ' ನೆನ್ನುತ ಬಂಧಿಸೆ, ಕಟ್ಟಿಗೆ
ಸಿಲುಕದನಿವನಾರೇ ?

೧೧

ಹರಿದೋಡುವನಂ ಸೈರಿಸದಮ್ಮನು
ಒರಳಲಿ ದಾವಿಂ ಕಟ್ಟುತಲಗಲಲು,
ಸರಿಯುತ, ಮತ್ತಿಯಮಳ್ಮರದಿರುಕಿನೊ-
ಳಿರುವವನಿವನಾರೇ ?
ತರುಗಳೆರಡುಂ ಮುರಿದುರುಳಲ್, ಬಂ-
ದರು ಶಾಪವನುಳಿದುತ್ತರ ಪತಿಯಣು-
ಗರು; ಬಳಿಕವರಿಂ ನತಿ-ನುತಿಯಾಂತಿಹ
ಯಮಸುತನಿವನಾರೇ ?

೧೨

ಎಳವೆಯೊಳುಂಡರೆ ಹಾಲ್ಮೊಸರಳಿಯಂ,
ಬಳವಿಯು ಕಳೆವೆತ್ತೊಲಿಯುವುದೆಂಬುದ
ತಿಳಿಸಲು ಲೋಕಕೆ, ಹಸಿ ಹಾಲ್ಬೆಣ್ಣೆಯ
ಮೆದ್ದವನಿವನಾರೇ ?
ಎಳೆಗೊಲ್ಲತಿಯರ ನಲ್ಮೆಯನಾನುತ,
ಬಳೆಯುತ, ತುರುವಳರೆಳೆಯರ ಕೆಳೆತನ-
ದೊಳು ದನಗಾಯುತ, ಗೋರಕ್ಷೆಯನಿಳೆ-
ಗರಿಪಿದನಿವನಾರೇ ?

೧೩

ತುರು–ಕರು ಕಾಯುವ ಕಾಲದಿ ವ್ರಜದಲಿ
ತರುಗಳ ತಣ್ಣೆಳಲನ್ನಾಶ್ರಯಿಸುತ,
ಸುರುಳಿಲೆ ಸುಳಿಯಿಂ ಪೀಪಿಯನೂದುತ
ವಿಹರಿಪನಿವನಾರೇ ?
ಮರಿಗೋಗಿಲೆಗಳ ಕುಹುಕುಹು ರವವನು-
ಕರಣೆಯಗೈಯುತಲಣಕಿಸಿ ನಗುತಲಿ,
ಕರ ತಾಡನ ಪರನಾಗಿಹ ಚೆಲುವಿನ
ಚೆನ್ನಿಗನಿವನಾರೇ ?

೧೪

ಕಲಕಲ ನಾದದಿ ಹರಿಯುವ ಯಮುನೆಯ
ಸುಲಲಿತ ವೇದಿಕೆಯಗ್ರದಿ, ಮುದದಲಿ
ನಲಿಯುವ ಮಂಜುಳ–ಮೋಹನ–ಲೀಲಾ
ವಿಗ್ರಹನಿವನಾರೇ ?
ಕೊಳಲನ್ನೂದುತ, ಸರಸದಿ ತೀರದೊ-
ಳಲೆಯುವ, ಮುಗ್ಧ–ಮನೋಹರ ಕಾಯದ
ಅಲಕ ವಿಚಿತ್ರಿತ ವದನ ಸರೋರುಹ
ಸುಂದರನಿವನಾರೇ ?

೧೫

ಪುಲಿನದಿ ಲೀಲಾ ಕಮಲವ ಬರೆಯುತ,
ಲಲಿತ ಕ್ರೀಡೆಯನಾಡುತಲೋಡುತ,
ಸಲಿಲ ವಿಹಾರ ವಿಮೋಹಿತ ಮಾನಸ-
ನಾಗಲು ನಲಿಸಿಸಲಿ
ವಲಿತ–ವಿಲೋಲ-ತರಂಗಿತ ಯಮುನಾ-
ಜಲದಲಿ 'ಜಲಕ' ವ ನಾಡುವ, ನೂತನ
ಜಲಧರ ಶ್ಯಾಮಲ, ಕೋಮಲ ಕಾಯ ಕಿ-
ಶೋರನು ಇವನಾರೀ ?

೧೬

ಕಂದರನೆಲ್ಲರನಂತೆಯೆ ದನಗಳ
ಮಂದೆಯ ತನ್ನಯ ವಿಷದಿಂ ಮೂರ್ಛೆಯ-
ನೊಂದಿಸೆ ಕಾಳಿಯನವನಾ ಹೆಡೆಯಲಿ
ಕುಣಿದವನಿವನಾರೀ ?
ವೃಂದಾವನದಲ್ಲಿರಲೊಂದು ದಿನಂ
ಮುಂದಿನ ತಾಳವನಕ್ಕೆಯ್ದಲ್ ಮುನಿ-
ಸಿಂದಂ ಬಂದಾ ಧೇನುಕ ರಾಸಭ-
ನಸು ಹಿಳಿದವನಾರೀ?

೧೭

ತನ್ನಯ ಸುತ್ತಲು ತುರುಪಿಂಡೊಲಿದಿರೆ,
ಉನ್ನತ ಶಿಲೆಯಲಿ ಮಂಡಿಸಿ ಮುದದಲಿ
ಸನ್ನುತ ಮುರಲಿಯ ಬಾಜಿಸಿ ಮೋಹಿಪ
ಮೋಹನನಿವನಾರೀ ?
ಕನ್ನೆಯರೆಲ್ಲರು ರಾಸ ಕ್ರೀಡಾ-
ಸನ್ನೆಯರಾಗುತ, ಸುತ್ತಲು ಕುಣಿಯಲು,
ಚೆನ್ನೆನೆ ವೇಣುವನೂದುತ ಮಧ್ಯದಿ
ನಲಿದವನಿವನಾರೀ ?

೧೮

ಆ ಕಡೆ ಈ ಕಡೆ ಸೈನಿಕ ಸಾಗರ
ವೇಗೀಭವಿಸಿರಲದರೊಳಸುಗ್ರೀವ
ಶ್ರೀಕರ ಪಾರ್ಥ ಸ್ಯಂದನವಟ್ಟುವ
ಸಾರಥಿಯಿವನಾರೇ ?
‘ಏಕೆನ ಗಾಜಿಯು ಸಾಕೆಂ’ ದೆನ್ನುತ
ವ್ಯಾಕುಲನಾದಾ ವಿಜಯನ ಮನವ-
ನ್ನಾ ಕಾಳಗಕನುವಾಗಿಸಿ, ಗೀತೆಯ-
ನರಿಪಿದನಿವನಾರೇ ?

## ವಿಶ್ವ ಶಾಂತಿ*

೧

ಸತ್ತವರ ಬದುಕಿಸಲು ನಾವರಿಯದಿರುವಾಗ
ಜೀವಿಪರ ಕೈಯಾರೆ ಕೊಲ್ಲುವುದು ತಪ್ಪು
ವಿಶ್ವದ ಸಮಸ್ತ ಮಾನವರೊಂದೆ ಜಾತಿಯಿಹ-
ರಂತರದ ಕಲ್ಪನೆಯು ಬರೆ ಮೌಢ್ಯ-ಜೊಪ್ಪು !

೨

ದಯೆಯೆ ಧರ್ಮದ ಮೂಲ, ಹಿಂಸೆಯೆಂದರೆ ಪಾಪ,
ಇದ್ದಷ್ಟು ಸಂತೃಪ್ತಿ, ಮಾನವ ಪ್ರೇಮ,—
ಇವೆ ಸತ್ಯ ಸಂಸ್ಕೃತಿಯ ಸಾರ ಸರ್ವಸ್ವವೆನೆ
ಭೂಷಣವೆ ಹಿಂದಿನಂತೆಯೆ ಯುದ್ಧ ಕಾಮ ?

೩

‘ ಸಾಹಿತ್ಯ–ವಿಜ್ಞಾನ–ಕಲೆಗಳಲಿ ಮುಂದಿಹೆವು
ನಾಗರೀಕತೆಯಲ್ಲಿ ಪ್ರಗತಿಯಾಂತಿಹೆವು ’
ಎಂಬ ಜಂಭದ ರಾಷ್ಟ್ರಗಳಲಿ ಕಾಡಿನ ಪಶುಗ-
ಳಂತೆ ಮಾರಣಯಜ್ಞ ಲಜ್ಜೆಗಾಸ್ಪದವು

೪

ಎಷ್ಟೆಷ್ಟೊ ಸತಿಯರನು ಪತಿಗಳಿಂದಗಲಿಸಿದ,
ಮಕ್ಕಳನು ಕಂಬನಿಯ ಮಳೆ ಕರೆಯಿಸಿರುವ,
ಬಂಧು–ಬಳಗವ ಗೆಳೆಯ–ಗೆಳತಿಯರ ಕೂಗಿಸಿದ,
ರಣ ಯಾಗಕಾಯ್ತು ಪೂರ್ಣಾಹುತಿಯ ಭಾವ !

*ದ್ವಿತೀಯ ಮಹಾಯುದ್ಧದ ವಿಜಯ ದಿನಾಚರಣೆಯ ನೆನಪಿಗಾಗಿ

೫

ಸೋತವರ ಗೆದ್ದವರು ಕಾಲ್ಕೆಳಗೆ ತುಳಿಯುವುದು,
ಸ್ವಾರ್ಥ ಸಂಪೋಷಣೆಗೆ ಮರ್ದನದ ರೀತಿ,
ರಾಷ್ಟ್ರ–ರಾಷ್ಟ್ರಗಳಲ್ಲಿ ಭೇದ ಕಲ್ಪನೆಯಿಷ್ಟು
ಬರುವ ಯುದ್ಧಕೆ ಮೂಲ; ಮರೆಯುವುದನೀತಿ

೬

ವಿಶ್ವ ಸಾಗರದಲ್ಲಿ ಯುದ್ಧೋರ್ಮಿ ನಿಂತಿರಲಿ !
ದ್ವೇಷಾಗ್ನಿಯುದ್ಗಮಿಸಿ ಕಿಡಿ ಸಿಡಿಯದಿರಲಿ !
ಗಾಳಿಯಲಿ ಸರ್ವ ಸಮತಾ ಭಾವ ಕಂಪಿಡಲಿ !
ವಿಶ್ವ ಶಾಂತಿಯ ಕಹಳೆ ಭೋರ್ಗರೆಯುತಿರಲಿ !

೧೯೪೫

# ಪ್ರೇಮಾಂಜಲಿ

೧

ಸಂಜೆಯಾಯಿತು; ರಾಗವಾಗಸವನಾವರಿಸಿ
ರಂಜಿಸಿದ ತೆರದಲ್ಲಿ, ನನ್ನೆದೆಯಲಿ
ಅನುರಾಗವಿಡಿದಿಹುದು ತಿಳಿಯಲಾರೆಯ ನೀನು?
ಮನವು ತವಕಿಸುತಿಹುದು ಬರಲಾರೆಯ?

೨

ನಿಮಿಷಗಳು ನಿಮಿಷಗಳು ಕಾಲನಾಳದೊಳಿಳಿದು,
ಸಮವಾಗಿ ಸರಿಯುತಿವೆ ನಿನ್ನ ಸೇರುವೆಯು
ಸಮನಿಸದೆ ಸಮಯವದು ಶೂನ್ಯತೆಯನಾಸವುದು
ಪ್ರೇಮಕನಿತಾದರೂ ತಾಳ್ಮೆಯಿಹುದೇ?

೩

ಕಾಳಿಂದಿ ಸವಿಸರದಿ ಸಂಜೆಗಾಯನವನ್ನು
ಹೇಳುತ್ತ, ಹೊತ್ತನ್ನು ವ್ಯರ್ಥವಾಗಿ
ಹಾಳುಮಾಡದೆ, ಮೆಲ್ಲಮೆಲ್ಲನೇ ಹರಿಯುವಳು
ಹೇಳು—ನೀನೇಕಿಂತು ಕಾಲಗಳೆವೆ?

೪

ಕೆಲವು ಸುಮಗಳ ಕೋದು ಸರವ ಸುರಿದಿಹೆನಿಂದು
ಗೆಲವಿನೊಲವಿನ ಕಾಣ್ಕೆಯಿದನು ನೀನು
ಕೊಳ್ಳು ಬೇಗನೆ ಬಂದು; ಇಲ್ಲದಿರಲಾ ಮಾಲೆ
ಕಳೆಗುಂದಿ ಕೊರಕೊರಗಿ ಸೊರಗದೇನು?

೫

ನಿನ್ನ ನಲ್ಗೊರಳಲಿನಾ ‘ ಗೀತೆ ’ ಯನ್ನಾಲಿಸಲು
ನನ್ನ ಈ ಕಿವಿಯಿಂದು ತವಕಿಸುವುದು
ನಯನ ಮೋಹನ ದೇಹ ಶೋಭೆಯನು ದಿಟ್ಟಿಸಲು,
ಬಯಸುವುವು ಕಣ್ಣುಗಳು ಬರಲಾರೆಯಾ ?

೬

ಬಗೆಯ ನಲ್ಮೆಯ ನಿಧಿಯೆ! ನನ್ನ ಬಾಳಿನ ಬೆಳಕೆ!
ಸೊಗದ ಸನ್ಮೂರ್ತಿಯೇ! ಬಾರೆಯೇನು ?
ಹೇ ಪವಿತ್ರ ಪ್ರೇಮಮಯನೆ! ಕರುಣಾಳುವೇ!
ತಾಪವನು ತಿಳಿಯೆಯಾ ಹೆಂಗರುಳಿನ!

೭

ಹೇ ನಲ್ಲ ! ನೀನಾವ ತಾಣದೊಳಗಿದ್ದರೂ,
ನನ್ನೆದೆಯು ನಿನ್ನೆದೆಯೊಳೈಕ್ಯವಾಗಿಹುದು
ಬೇಡುವೆನು— ನಿನ್ನ ವಿಮಲ ಪ್ರೇಮ ನನ್ನಲ್ಲಿ
ಕೂಡಿರಲಿ. ನಿನಗಿದೋ ಪ್ರೇಮಾಂಜಲಿ !

೧೯೩೪

## ಕಿಶೋರಿ

೧

ನಾನು ಕಂಡಿರುವ ಚೆಲು ಬಾಲೆಯರ ಸೌಂದರ್ಯ
ಸಾರ ಸರ್ವಸ್ವದಂತಿವಳೆಸೆಯುತಿಹಳು
ಕಣ್-ಮನಕೆ ಸ್ನೇಹರಸದೊಸರ ಸೇಚಿಸುತಿವಳು
ತಂಗದಿರನಂತೆ ತಂಪೀಯುತಿಹಳು

೨

ಇವಳ ಕಡೆಗಣ್ಣೋಟದಲ್ಲಿ ಮಿಂಚಿನ ಚಂಚ-
ಲೇಕ್ಷಣವು ಮನೆ ಮಾಡಿ ಕೊಂಡಿರುವುದು
ಇವಳ ಮಂದಸ್ಮಿತದಿ ಪ್ರೇಮ ರಸವೊಸರುತ್ತ,
ಜೊನ್ನವದು ತುಂಬಿ ತುಳುಕುತ್ತಲಿಹುದು

೩

ನಡೆಯುವ ಕಿಶೋರಿಯಾ ಬೆಡಗ ಬಣ್ಣಿಪುದೇನು ?
ಬಡನಡುವು ಬಳುಕುತ್ತಲಿರುತಿರುವುದು
ನಿಡು ಜಡೆಯು ನಲಿಯುವುದು. ನಳಿ ತೋಳು ಒಲಿಯುವುದು
ಕಡುಗಾಡಿಯನ್ನವಳು ಸೂಸುತಿಹಳು

೪

ಇವಳ ಎದೆಯುಬ್ಬಿನಲಿ ಜನರ ಮನವನು ಸೆಳೆದು,
ವಶ್ಯವಾಗಿರಿಸುತಿಹ ಮಾಟವಿಹುದು
ಇವಳ ಚೆಂದುಟಿಯಲ್ಲಿ ಸಂಜೆಗೆಂಪಿನ ಸೊಬಗು
ಮುಗ್ಧತೆಯ ಮುಗುಳು ನಗು ನಗುತಿರುವುದು

೫

ಚೂರ್ಣ ಕುಂತಳವಿವಳ ವದನದಲಿ ನಲಿಯುತ್ತ,
ಸೊಬಗನಾ ಚಿತ್ರವನು ಬರೆದಿರುವುದು
ಹುಣ್ಣಿಮೆಯ ಚಂದಿರನ ಸೌಂದರ್ಯವನ್ನಿಳಿಕೆ-
ಗೈಯುವುದು ಶೋಭಿಸುವ ಮುಖಕಮಲವು

೬

ಇವಳ ಸವಿನುಡಿಯ ಸರಸತೆಯಲ್ಲಿ ಅಮೃತವುಯ
ಮಾಧುರ್ಯ ಮನೆ ಮಾಡಿ ಮೆರೆದಿರುವುದು
ಈವಳ ಮೆಲುನಡಿಗೆಯವಸರದಲ್ಲಿಯೊಲೆಯುತಿಹ
ಸೆರಗು ನಮ್ಮನು ಸನ್ನೆಯಿಂದ ಕರೆಯುವುದು

೭

ಇವಳೆ ಮುದ್ದಿನ ಕಣಿಯು, ಇವಳೆ ಪ್ರೇಮದ ಮಣಿಯು.
ಇವಳೆ ಸೊಗದಾಸರೆಯದಾಗಿರುವಳು
ಇವಳೆ ಸೊಬಗಿನ ಸೂರೆಯಿವಳೆ ನಲವಿನ ಸೀರೆ,
ಇವಳೆ ಪ್ರಣಯದ ದೇವಿಯಾಗಿರುವಳು

೧೯೩೪

# ನನ್ನಾಕೆ

೧

ಜೌವನದ ಬಟ್ಟಲಲಿ ಪ್ರೇಮ ಸುಧೆಯನ್ನೆರೆದು
ಕುಡಿಸುತಿಹ ನನ್ನಾಕೆಯಿರೆ, ಸಗ್ಗವೇಕೆ?
ಜೀವ ಮಧುಕರನವಳ ಮುಖ ಕಮಲದಿಂದೊಲಿದು
ಸೌಂದರ್ಯ ಮಧುವೀಂಟುತಿರೆ ಬೊಮ್ಮ ಬೇಕೇ?

೨

ಎತ್ತ ನೋಡಿದರತ್ತಲವಳ ಮೊಗ ಚಂದಿರನು
ಮುಗುಳುನಗು ಬೆಳದಿಂಗಳೆರೆಯುತಿರುವಂತೆ
ಚಿತ್ತ ಭಾವದ ಕಣ್ಗೆ ದರ್ಶನವನೊದವಿಸುತ,
ಲೋಪವೆಸಗುವಿತರ ಚಿಂತೆಗಳ ಸಂತೆ

೩

ಮುಡಿಯಲ್ಲಿ ಮಲರಿರುವ, ನಳಿತೋಳ ಶಾಖೆಗಳ,
ಕೇಸುಗುರ ಬೆರಲುಗಳ ತಳಿರನಾಂತೆಸೆವ,
ನಡೆಯುವೆಳವಳ್ಳಿ ಯೊಂದತ್ತಿತ್ತ ಮೆಲ್ಲಂಚ
ಹರಹುತ್ತ ಸಂಚಾರವೆಸಗುವಂತಿರುವ—
ನನ್ನಾಕೆಯೆನ್ನ ಜೀವನ ತರುವನಪ್ಪಿರಲು,
ಸಂತಸದ ಸುಮಗಳಿಗೆ ಬರಗಾಲವಿಹುದೇ?
ಬನ್ನಗಳ ಕತ್ತಲೆಯ ಮೊತ್ತಗಳ ಕೆಡುನೆನಪು
ನೇಸರಿದಿರಿನ ಮಂಜುವನಿಯಾಗದಿಹುದೇ?

೪

ಅವಳ ಚೆಲುಗೆನ್ನೆಗನ್ನಡಿಯಲ್ಲಿ ನನ್ನ ತುಟಿ-
ಯೆಸಳುಗಳ ಪಡಿನೆಳಲ ಕಾಣುತಿರುವಾಗ,
ಅವಳ ಮೈಯೊತ್ತಿನಲಿ ಕುಳಿತೆನ್ನ ಹಸ್ತಗಳು
ಹೆಗಲುಗಳ ಬಳಸುತ್ತ ತಬ್ಬುತಿರುವಾಗ,—

ಅವಳ ಕಂಗಳ ಹೊಳಪು ನನ್ನನಾವರಿಸಿರಲು,
ಸೋಂಕಿನಮೃತಾನಂದ ಚಿಮ್ಮುತಿರಲು,
ಕಿವಿಗಳಿಗೆ ಇನಿದನಿಯು ಮೆಲ್ಲೊಸೆದು ಬೆಸೆದಿರಲು,
ಬೇರೆ ಬ್ರಹ್ಮಾನಂದಕಿಹುದು ಸೋಲು!

೫

'ಬಡತನದಿ ಚಿತೆಯಿಲ್ಲ; ಬಾಳಿನಲಿ ಬೆಳಕುಂಟು
ಎರಡು ಜೀವಗಳೈಕ್ಯವಾದ ಬೆಸುಗೆಯಲಿ
ಒಡವೆರೆದ ನಲ್ಮೆಯಲಿ ನೈಜ ಸುಖವುಂಟು'
ಎಂಬ ಭಾವದ ಬೊಧೆಯರಿತೆನಾಕೆಯಲಿ

೧೯೪೨

# ನಲ್ಲೆಯ ನೆನಪು*

ಪಲ್ಲವಿ

ನಲ್ಲೆ! ಎಂದೈತರುವಿಯೊ?
ಬಗೆಗೆ ಸೊಗವನ್ನೀವೆಯೊ?

೧

ಯಾವ ಕಜ್ಜವ ಗೈಯಲು ಹೋದರು
ನಿನ್ನ ನೆನಪೇ ಸುಳಿವುದು
ಆ ಚಿತ್ತಗಿಟ್ಟಿಸೊಳಾವ ಕಾರ್ಯವ—
ನೆಸಗಲಿಚ್ಛೆಯು ಬಾರದು.

೨

ಪ್ರಕೃತಿ ರಂಗದೊಳೆಲ್ಲಿ ನೋಡಲು,
ನಿನ್ನ ನೆನಪಿದೆ ನಲ್ಲೆಯೆ!
ಆವ ವಸ್ತುವ ಕಾಣ ಹೋದರು
ನಿನ್ನ ಪಡಿನೆಳಲಲ್ಲಿಯು

೩

ಸಂಜೆಗೆಂಪನು ನೋಡಿ, ಮನವನು
ಬಿನದಗೊಳಲೆಳಸಿದ್ದರೂ.
ನಿನ್ನ ಚೆಂದುಟಿಗೆಂಪಿನ ಸ್ಮೃತಿ
ಬಂದು ಚಿತ್ತವ ಕಸಿವುದು.

೪

ನೇಸರಿನ ಎಳೆಬಿಸಿಲಸಂತೆಯೆ
ತಿಂಗಳಿನ ಬೆಳ್ದಿಂಗಳ
ನೋಡಿ ನೋಡುತ ನೆನಪು ಸಲಿವುದು,
ನಿನ್ನ ನಗು ಮಲ್ಲಿಗೆಗಳ

* ಹೆಂಡತಿಯು ತಾಯಿಮನೆಗೆ ಹೋಗಿದ್ದಾಗ

೫

ಮಾಮರದ ಮರೆಯಲ್ಲಿ ಕುಕಿಲುವ
ಕೋಗಿಲೆಗಳಿಸಿದನಿಯನು
ಆಲಿಸುತ್ತಿರೆ ನಿನ್ನ ಮಧುರಾ—
ಲಾಪವನು ನಾ ನೆನೆವೆನು

೬

ಬಳ್ಳಿಯಲಿ ಮಲರಿರುವ ಹೂಗಳ
ಚೆಲುವಿಕೆಯ ದಿಟ್ಟಿಸುತಿರೆ,
ನಿನ್ನ ನಗೆಗಣ್ಣುಗಳು ಬಗೆಯಿಂದಿ—
ರಲ್ಲಿ ಕುಣಿವಂತೆಸಿಪುದು

೭

ಕತ್ತಲೆಯ ಕಾಳಿಮೆಯ ನಿಟ್ಟಿಸೆ,
ನಿನ್ನ ಸುಳಿಗುರುಳೋಳಿಯು
ಕಾಷ್ಣ್ಯ ಕಣ್ಣಿಗೆ ಕಟ್ಟಿದಂತೆಯೆ
ನಲ್ಲೆ ! ಸವಿನೆನಪೆಸೆವುದು

ನಲ್ಲೆ ! ಎಂದೈತರುವೆಯೋ ?
ಬಗೆಗೆ ಸೊಗವನ್ನೀವೆಯೋ ?

## *ಇಂದು ಬರುವಳು ನನ್ನ ಮನದನ್ನೆ,—

ಇಂದು ಬರುವಳು ನನ್ನ ಮನದನ್ನೆ, ಮಾನಸಕೆ
ಸಂತೋಷ ಸಂಭ್ರಮೋತ್ಸಾಹ ಸುರಿಸಿ,
ಒಂದು ತಿಂಗಳಗಾಧ ವಿರಹ ಸಾಗರವನ್ನು
ದಾಟಿಸಳು ಸಗ್ಗದೀವಿಯನೊದವಿಸಿ

ಎಲ್ಲಿ ನೋಡಿದರಲ್ಲಿ ನಲವಿನ್ನೈಸಿರಿಯೋರಿ,
ಚೆಲುವಿನೊಸಗೆಯ ಕಣಿತ ಕಣ್ಣಮುಂದೆ:—
ಉದಯ ಭಾಸ್ಕರನಿಂದು ರಾಗ ರಕ್ತತೆಯಿಂದ
ಪ್ರೇಮ ಪೂಜಕನಾಗಿ ಮೆರೆಯುತಿಹನು

ವಿಹಗ ಸಂಕುಲದುಲಿತ ಸುಪ್ರೀತಿ ಸಂಗೀತ
ರಾಗ ರಸ ಮಧುನಾದವಾಗಿರುವುದು
ಕಣ್ಣೆದಿರ ಪೈರ ಜೆಳೆ ಹಸುರು ಹೊಳೆ ಹರಿವಂತೆ
ಒಲುಮೆಯಲೆಯೊಲೆವಂತೆ ಭಾಸವಿಹುದು.

*          *          *          *

ಹಗಲುಗಳ ಜಕ್ಕವಕ್ಕಿಗಳಂತೆ ನಾವಿಬ್ಬ-
ರೆಡೆವಿಡದೆ ಸಂತತಂ ಸೇರುವೆಯನು
ಪಡೆದಿರಲು ಬೇಕೆಂದು ಒಡನಾಟವಿರಲೆಂದು
ಸ್ವಾರ್ಥ ದೃಷ್ಟಿಯ ಚಿತ್ತ ಚಿಂತಿಸಿದರೂ,
ಆಗೊಮ್ಮೆ ಈಗೊಮ್ಮೆ ತಾಯುಮನೆ–ತವರುವನೆ-
ಯೆಂದು ಹೋಗಲು ಬರಲು ನಲ್ಲೆಗಿಹುದು
ಎಳೆತನದಿ ಸಾಕಿರುವ ತಂದೆ-ತಾಯ್ಗಿರ ಮಮತೆ
ಬಂದು ಮಡದಿಯು ಕರೆದು ಕೊಂಡುಯ್ವುದು

ಹೆಂಡತಿಯು ತವರುಮನೆಯಿಂದ ಬರುವ ದಿವಸ.

ಆಗವಳ ನಗುಮೊಗದ ಬೆಳಗು, ಕದಪಿನ ಮೆರುಗು,
ಸವಿದುಟಿಗಳಿಂಪು–ಬೆಳ್ಗಿಂಪು–ಸೊಂಪು,
ಮಾನಸೆಳೆವ ನೀಳ್ಗಣ್ಣುಗಳ ಕಾಂತಿ-ಚಂಚಲತೆ
ಮುಂಗುರುಳುಗಳ ಕೊಂಕು–ಸುಳಿಯು–ಕಂಪು—

ಕೆಲವು ದಿನಗಳ ವರೆಗೆ ನನ್ನಿಂ ವಿಯೋಗವನು
ಪಡೆದು ಸಹ್ಯಾಸಾಧ್ಯತೆಯ ಪಡೆವುವು
ಆದರೂ ಮನವು ಮೌನದೊಳಿರದೆ, ಭಾವನೆಯ
ಭಿತ್ತಿಯಲಿ ನಲ್ಲೆಯಂಕಿತ ಗುರುತಿಸಿ,—

ಕಾಲವನು ತಳುವಿ, ಇಂದಿನ ತೆರದ ದಿನವನ್ನು
ಕಾಂಬ ಸೈಪಿನ ಸುಕೃತವನುಭವಿಪುದು
ಎಂದಿಗಿಂತಲು ಇಂದು ಸಂತೋಷದಾಧಿಕ್ಯ-
ವದರಿಂದ ವಿರಹದಲಿ ಲಾಭವಿಹುದು

ಇಂದೋಪಳೈತಂದು, ಪ್ರೇಮ ಪ್ರವಾಹದಲಿ
ಆನಂದ ಜಲದಿಂದ ಮೀಯಿಸುವಳು!
ತೋಳುಗಳ ಹೂಸರಗಳಿಂದೆನ್ನ ಸೆರೆವಿಡಿದು,
ಸವಿ ಮುತ್ತುಗಳ ಮಾಲೆ ತೊಡಿಸಲಿಹಳು !!

೧೯೪೩

# ಕೋಪವೇತಕೆ ಮಾನಿನಿ?

ಪಲ್ಲವಿ

ಕೋಪವೇತಕೆ ಮಾನಿನಿ ?
ಹುಸಿಮುನಿಸ ನನ್ನಲಿ ನೀಗು ನೀ!

೧

ಜೀವನವೆಂಬುದು ಜೀವನ ಕೈಲಿಲ್ಲ;
ನಶ್ವರವಾಗಿದೆ ವಿಶ್ವದಲಿ
ಇಂದೋ ನಾಳೆಯೊ ಎಂಬುದು ತಿಳಿದಿಲ್ಲ
ಬಾಳ್‌ಗುಳ್ಳೆ ಸಿಡಿವುದು ದಿಟವಿಲ್ಲಿ

೨

ಹೀಗಿರಲೇಕಾಗಿ ನಮ್ಮಿಬ್ಬರೆಡೆಯಿದು
ಏಕತೆಯನು ಬಿಟ್ಟು ದೂರ–ದೂರ ?
ಸಿಟ್ಟಿನ ಸಾಗರ ಹಟದ ಸವಿಾರನ
ತೀಟದಿ ಚಿಮ್ಮುತಲಿದೆ ಜೀಸರ

೩

ಹಿಂದಿಲ್ಲ–ಮುಂದಿಲ್ಲ; ನಡುವಿನ ಜೀವನ
ಶೂನ್ಯಾಕಾಶದ ತಾರೆಯಿದೆ
ಮೋಡವು ಮುಸುಕಿ ಮುಗಿವುದಕಿಂತ ಮುನ್ನವೆ
ಸೂರೆಗೊಳ್ಳುವ ನಾವು ಸುಖದ ಸುಧೆ

೪

ಜವ್ವನವೆಂಬುದು ಹೆಚ್ಚಿಲ್ಲ; ಬಾನಿನ
ಕಾಮನ ಬಿಲ್ಲಿನ ಹೋಲುವೆಯು
ಹಲವು ಬಣ್ಣಗಳಿಂದು ವೈವರ್ಣ್ಯವಪ್ಪುವೊ
ಸಾಕೀ ಸಿಟ್ಟಿನ ವಿರಸತೆಯು

೫

ಹಲ್ಲುಗಳಿದ್ದಾಗ ಹುರಿಗಡಲೆಯು ನಿಜ
ಮತ್ತಿಲ್ಲಿ ಸಂತೋಷ ಮುದಿತನದಿ ?
ಇಂದಿನ ಹಾಲನ್ನವನು ನಾವು ಬಿಟ್ಟರೆ,
ನೈರಾಶ್ಯವಡಸದೆ ಜೀವನದಿ ?

೬

ಇನ್ನೇಕೆ ಹುಬ್ಬಿನ ಬಳ್ಳಿಯೊಳಾ ಕೊಂಕು ?
ಕಣ್ಣಿನ ಕಡೆಯಲಿ ಕಡುಗೆಂಪು ?
ತುಟಿಯುದುರುವುದೇಕೆ? ಮೂಗರಳುವುದೇಕೆ?
ಮೂಡಿ ಬರಲಿ ಬಿಳಿನಗೆಯಿಂಪು !

೭

ಇಂದಿನ ದಿನ ನಮ್ಮದಾಗಿರೆ, ನಾಳೆಯ
ಯೋಚನೆಯೇತಕೆ ?— ಬರಿಕನಸು
ಬಾಳಿನ ಬಳ್ಳಿಯ ಬಿಳಿ ಹೂವೆ ! ಬಾ ಬಾಲೆ!
ಜೀವನವಾಗಲಿ ದಿಟ ನನಸು

೧೯೨೫

# " ಸುಖವಿಲ್ಲ! "

## (ಹೆಂಡತಿಯ ಮಾತು)

" ನಿಮ್ಮ ಕೈಯನು ಹಿಡಿದು, ಮೂರು ಸುಗ್ಗಿಯು ಮಾ...
ನಾಲ್ಕನೆಯದಿದು ತಲೆಯ ಹೊರ ಹಾಕಿತಲ್ಲಾ ?
ಚಕ್ರ ನೇಮಿ ಕ್ರಮದಿ ಹಗಲಿರುಳು ತಿರುತಿರುಗಿ.
ಮಾಸ–ವರ್ಷಗಳಲ್ಲಿ ಪರಿಣಮಿಪುದಲ್ಲಾ ?

ಆಚೆ ಮನೆ ಕಸ್ತೂರಿ, ನೆರೆಮನೆಯ ಸಿಂಗಾರಿ.
ಓಣಿ ಮನೆಯಾ ತಾರಿ, ಬೀದಿ ಮನೆ ಗೌರಿ,
ಈಚೆ ಮನೆಯಾ ಗಂಗೆ, ಮುಗ್ಗುಲಲ್ಲಿಹ ತುಂಗೆ,
ದೊಡ್ಡಮನೆ ಕಾವೇರಿ, ಗುಡ್ಡಿಮನೆ ನಾರಿ.—

ಇವರೆಲ್ಲ ತಂತಮ್ಮ ಗಂಡಂದಿರೊಡನೊರೆದು.
ಹೂಸೀರೆ–ಜರಿಸೀರೆ–ರವಕೆಗಳನು
ಉಟ್ಟಿಹರು; ತೊಟ್ಟಿಹರು ಕೈಗಳಲಿ ಕತ್ತಿನಲಿ
ಬಗೆ ಬಗೆಯ ಬಂಗಾರ ತೊಡವುಗಳನು

ಕಪ್ಪು ಸೀರೆಯನುಡುವುದೇ ನನ್ನ ಹಣೆಬರಹ
ಜೇರೆ ಬಣ್ಣದ ಸೀರೆ ತಂಪರೇನು ?
ತೆಳುವಾದ ಬಿಳಿ ಸೀರೆ, ಚಿತ್ರದಂಚಿನ ಸೀರೆ
ಕನಸಿನಲ್ಲುಡುವುದೇ ನನ್ನ ವಿಧಿಯೇನು ?

ತಂದೆ ಮಾಡಿಸಿ ಕೊಟ್ಟ ಚಿನ್ನದಾಭರಣಗಳು
ಒಂದೆರಡೆ ಅಂದಿನಿಂದಿಂದುವರೆಗೆ
ನನಗಾಗಿ ತೊಲವೊಂದಾದರೂ ಚಿನ್ನವನು
ಕರಗಿಸಲದೇಂ ಮನವು ಬಂತೆ ನಿಮಗೆ?

'ಯುದ್ಧ ದುರ್ದಿನದಿಂದ ಪವನಿಗೇರಿತು ಬೆಲೆಯು
ಕಡಿಮೆಯಾಗಲಿ ಮಾಡಿಸುವೆ; ಚಿಂತೆಯೇಕೆ?
ಹೊನ್ನ ತಗಡನು ಮಾಡಿ ನಿನ್ನ ಮುಚ್ಚಿಪೆ' ನೆಂದು
ಒಲ್ಲೆಯಾಡುತಲಿರುವುದಿಷ್ಟೇನು ಸಾಕೇ ?

ತಲೆಗೆ ಪರಿಮಳದೆಣ್ಣೆ, ಕೇಶವರ್ಧನಿ ತೈಲ,
ಮೊಗಕೆ ಸೌಸನವೀಯುತಿಹ ಬಿಳಿಯ ಹುಡಿಯು,
ತಲೆ ಕೂದಲೋರಣದಿ ನಿಲ್ಲುವಂತಿಪ 'ಕ್ಲಿಪ್ಪು',
ಹೆಣೆಜಡೆಯ ತುದಿನೆಯ್ಯಲಿಹ ರೇಶ್ಮೆ ಕುಡಿಯು—

ಬಣ್ಣ ನೂಲಿನ ಚಿತ್ರ ಬಿಡಿಸಿರುವ ಕರವಸ್ತ್ರ,
ಕೈಗಳಿಗೆ ಹೊಸ ಬಗೆಯ ಗಾಜು ಬಳೆಯು,
ಈ ವಿಲಾಸದ ವಸ್ತುಗಳ ತನ್ನಿರೆಂದೆನಲು,
ನಿಮ್ಮ ಮುಖಮುದ್ರೆಯಲಿ ಮೌನ ಕಳೆಯು!

ಯಾವಾಗ ನೋಡಿದರು ಪುಸ್ತಕಗಳೊಡನಾಟ;
ಓದುವುದು, ಬರೆಯುವುದು— ಆಯಾಸವಿಲ್ಲ
ಹಗಲಿಡೀ ನಿಮಗಾಯ್ತು ಪಾಠಶಾಲೆಯ ಕೂಟ
ನನ್ನೊಡನೆ ಸಲ್ಲಾಪ–ಸರಸೋಕ್ತಿಯಿಲ್ಲ

ಸಾಕು ನಿಮ್ಮಯ ಪ್ರೀತಿ; ಬರಿಯ ಬಾಯುಪಚಾರ
ತನ್ನ ಕಾರ್ಯಕೆ ಮಾತ್ರ ನನ್ನನಾಶಿಪುದೇ?
ನಿಮ್ಮಿಂದಲೊಂದಿಷ್ಟು ಸುಖ ಹೊಂದಲೆನಗಿಲ್ಲ
ಬರಿ ಗುಲ್ಲು ಕಡು ನಿದ್ದೆಗೇಡೆಂಬ ಗಾದೆ!”

೧೯೪೫

## " ಸುಖವುಂಟು ! "

### (ಗಂಡನ ಉತ್ತರ)

" ಮುಗುದೆ! ಮೋಹನೆ! ನಲ್ಲೆ! ನಿನ್ನ ಮಾತನು ಕೇಳಿ.
ನಗುವುಕ್ಕಿ, ತುಟಿ ಮುಕ್ಕಿ, ಬರುತಿರುವುದು.
ನಸು ಮುನಿಸ ಹೊರಸೂಸಿ, ಕೊಂಕು ನುಡಿ ಚೆಲ್ಲಿ.
ಬಿಂಕವನೆಸೆವುದಿದೆಷ್ಟು ಚೆನ್ನಿರುವುದು

ಬಣ್ಣ ಬೆಡಗಿನ ಜರಿಯ ಸೀರೆಯೇತಕೆ ನಿನಗೆ ?
ಸರಳತೆಯು ಚೆಲುವು ಸೀರೆ ಸಾಲದೇನು ?
ಆ ಶಕುಂತಲೆ ನಾರ ಬಟ್ಟೆಯನ್ನುಟ್ಟಿರಲು.
ದುಷ್ಯಂತನಿಗೆ ಚೆಲುವೆನಿಸಿಯುತೇನು ?

ಹೊನ್ನ ಭೂಷಣವೇಕೆ ? ಲೋಹ ಹೊರೆಯಲ್ಲವೇ ?
ಆಭರಣವಿಲ್ಲದಿರೆ ಚೆಲುವು ಕುಂದೇ ?
ಸೀತೆ–ಪಾಂಚಾಲೆಯರಿಗಿದ್ದುವೇ ತೊಡವುಗಳು
ಕಾಡಿನಲಿ ದಾಟಿದರೆ ?— ಪತಿಯು ಜೊತೆಯೊಂದೇ;

ನಮ್ಮ ತೋಟದೊಳಿನ್ನು ಹೂಗಳರಳುತ್ತಿರಲು.
ಓರಣದಿ ತಲೆ ಬಾಚಿ, ಹೂ ಮುಡಿವರೇನು ?
ದಿನದಿನಕೆ ನಿತ್ಯ–ನೂತನವಾದ ಹೂ ದಂಡೆ
ಹೊನ್ನಿಗಿಂತಲು ಚಂದವಲ್ಲವೇನು ?

ಕುಸುಮಗಳ ಸೌರಭವು, ಚೆಲುವಿನಲಿ ವಿವಿಧತೆಯು,
ಮಾರ್ದವವು, ಹೊಂದೊಡವುಗಳಿರುವುದಿಲ್ಲ
ಕೃತ್ರಿಮತೆಯಲಿ ಚೆಲುವನಾನುವುದು ತರವಲ್ಲ;
ನೈಜತೆಯ ಸೌಂದರ್ಯ ಸಾಕು ನಮಗೆಲ್ಲ

ಬಾಹ್ಯ ವಸ್ತುಗಳಲ್ಲಿ ಸುಖ ಹುದುಗಿ ಕೊಂಡಿಲ್ಲ
ಮನದ ಮರೆಯಲಿ ಮನೆಯ ಮಾಡಿರುವುದು
ಆಸೆ ಮುಗಿಲುಗಳೋಳಿ ತಿಳವು ಗಾಳಿಗೆ ಚೆದರೆ,
ತೃಪ್ತಿ ಸಭವಲಿ ಸೊಗದ ನೇಸರೆಸೆಯುವುದು

ಕವಿತೆಗಳ ಗಂಧರ್ವ ಲೋಕದ ವಿಹಾರದಲಿ,
ಕಥೆ ವಾಚನದ ಕಿನ್ನರರ ಕೂಟದಲ್ಲಿ,
ನಾಟಕಂಗಳ ನಾಕದಪ್ಸರೆಯ ಲಾಸ್ಯದಲಿ
ಸುಖವುಂಟು ಮನದನ್ನೆ! ಭಾವಲಹರಿಯಲಿ"

೧೯೪೬

# ಪಂಪ

ಜೈನ ಸಾಮಯಿಕಾದಿಪೌರಾಣವನು ಬರೆದು
ಆದಿಕವಿಯೆನಿಸಿಕೊಂಡಿದ್ದರೂ, ಓ ಪಂಪ !
ಸಂಸ್ಕೃತದ ಸಾಹಿತ್ಯದಲಿ ಕಾವ್ಯ ವಾಗ್ಗುಂಫ-
ನವ ಮೊತ್ತಮೊದಲೆಸಗಿ, ಆದಿಕವಿಯೆನಿಸಿದ್ದು,
ಜಸವೆತ್ತ ವಾಲ್ಮೀಕಿ ಕಾವ್ಯರ್ಷಿಯಂತೆಮ್ಮ
ಹಳೆಗನ್ನಡದ ಕಾವ್ಯ ಪಂಥಕ್ಕೆ ನೀನಾದಿ-
ಕವಿಯಾಗಿ, ಬಿರುದಿನಸ್ಪರ್ಧತೆಯನುರೆ ಪಡೆದಿ!
ಹಾಗೆಯೇ ಲೌಕಿಕದಿ ಆ ಮಹಾ ವಿಕ್ರಮಾ-
ರ್ಜುನ ವಿಜಯವೆಂಬ ವಸ್ತುಕ ಸರ್ಗ ಬಂಧವನು
ತನ್ನ ಪೋಷಕನಾದ ಅರಿ ಕೇಸರೀ ರಾಜ-
ಗಂಕಿತವಡೆನೆ ಮಾಡಿ, ಕಾವ್ಯ ಕರ್ಮದಿ ಸಹಜ-
ಕವಿಯೆನಿಸಿಕೊಂಡೆ ! ಮಾಚಾಗದಾ ಕರ್ಣನನು
ತೋರಿ, ‘ಕರ್ಣರಸಾಯನಂ ಭಾರತಂ’ ಎಂದು
ಆರಿಪಿದ್ದೈ,— ಕೌರವನು ಚಲದೋಜನಿಂತೆಂದು !

೧೯೩೮

# ರನ್ನ

ಪಂಪ ಪಥದನುಕರಣೆಯಿಂದ ಚಾಳುಕ್ಯ ಸುತ-
ನಾದ ಸತ್ಯಾಶ್ರಯನನನಿಲಜಗೆ ಸರಿಗೈದು,
ನೆಗಳ್ದ ಸಾಹಸ ಭೀಮ ವಿಜಯವನು ಕೃತಿಗೈದು,
ವರ ಗದಾಯುದ್ಧವನು ಕನ್ನಡದೊಳೊಂದಿಸುತ
ಸಂದರೂ ನಿನ್ನದೇ ತನ್ನತನವಿದೆ ರನ್ನ !
ತೈಲಪನು ನಿನಗಿತ್ತ ಕವಿಚಕ್ರವರ್ತಿತ್ವ
ಸಾಜವಿದೆ. ನೀನೊರೆದ ಬಳಿಕ ಜೈನ ಸುತತ್ತ್ವ
ಬೋಧನೆಗೆ ಮನ ಮಾಡುತಜಿತ ತೀರ್ಥಂಕರನ
ಪಾವನಾಖ್ಯಾನವನು ಪುರಾಣ ತಿಲಕವನು
ನಿನ್ನವೀ ರನ್ನಗಳು ಕನ್ನಡಕೆ ತೊಡವುಗಳು !
ಪರಶುರಾಮನ ಚರಿತ–ಚಕ್ರೇಶ ಚರಿತ್ರಗಳು
ನಿನ್ನಷ್ಟು ಕೃತಿಗಳೆರಡಜ್ಞಾತ ವಾಸವನು
ತಳೆದಿಹವು. ನಿನ್ನ ದುರ್ಯೋಧನನ ಚಲದೇಳ್ವು
ಸ್ವಾತಂತ್ರ್ಯಸ್ಥೈರ್ಯವಂತೆಯೇ ಕರ್ಣಾರ್ಥ ಚೋದನವು !

೧೯೪೦

# ಕುಮಾರವ್ಯಾಸ

ಕನ್ನಡರ ಮನೆಮನೆಗೆ ಭಾರತದ ಸಂದೇಶ
ಗುಡುಗಾಡುವಂತೆಸಗಿ, ಚಪಲ ಕೃಷ್ಣನ ಮಾಟ,
ಗಂಡುಗಲಿ ಕಟ್ಟಾಳು ಭೀಮಸೂರ ಗದೆಯಾಟ,
ಕಲಿ ಸುಯೋಧನನ ಛಲ, ನರನ ವೀರಾವೇಶ
ಮೊದಲಾದುವನು ತನ್ನ 'ಭಾಮಿನಿ'ಯ ಮೋಡಿಯಲಿ,
ಹಲಗೆ–ಬಳಪವ ಬಳಸದಗ್ಗಳಿಕೆಯಲಿ ತೋರಿ,
ಅನ್ಯರೊಡ್ಡುವ ಕೊಳ್ಳದಗ್ಗಳಿಕೆಯನು ಬೀರಿ,
ಮೆರೆಸಿಯಲ ಕವಿ ಕುಮಾರವ್ಯಾಸ! ಲೀಲೆಯಲಿ
ಗದುಗಿನಲಿ ವೀರ ನಾರಾಯಣನ ಕಿಂಕರನು
ತಾನಾಗಿ, ದೇವನಡಿದಾವರೆಯ ಬಳಿ ಕುಳಿತು,
ಬರೆದೆಯೈ ಕನ್ನಡದ ತನ್ನತನವನ್ನೋತು!
ಭಾರತದಿ ರಸವಿರುವ ಮೊದಲ ದಶಪರ್ವವನು
ಕನ್ನಡಿಸಿ, ಪಾತ್ರಗಳು ಜೀವ ಕಳೆವೆತ್ತಂತೆ
ಎಸಗಿದೆ— ಕುರುಕ್ಷೇತ್ರ ಕಣ್ಮುಂತೆ ಕುಣಿವಂತೆ!

೧೯೪೩

# ರತ್ನಾಕರ ಕವಿ

ಹಾಡುಗಬ್ಬದ ಕಬ್ಬಿಗರ್ಗೆ ತಲೆಮಣಿಯಾಗಿ
ರಾರಾಜಿಸುತ್ತಿರುವೆ ಭರತೇಶ ವೈಭವವ
ಸಾಂಗತ್ಯ ಸಂಗೀತ ಧಾಟಿಯಲಿ ವಿರಚಿಸುವ
ಸ್ವೈಪಿಂಗೆ ನೋಂತ ರತ್ನಾಕರನೆ ! ನೀ ಯೋಗಿ-
ಭೋಗಿಗಳ ಬಗೆಯುಲರುವಂತೆ ಯೋಗ–ತ್ಯಾಗ-
ಗಳ ಬಟ್ಟೆಯಲಿ ಹಾಸು–ಹೊಕ್ಕಾಗಿ ಜಾಣ್ಮೆಯಲಿ
ರಾಗ ಭೋಗಗಳನ್ನು ನೆಯ್ದಿರುವೆ ಜೈನರಲಿ
ಆದ್ಯ ಚಕ್ರೇಶ ಭರತನ ಕತೆಯ ರಸದಾಗ-
ರವದಾಗೆ ತಿಳಿಗನ್ನಡದ ಸುಲಭ ಶೈಲಿಯಲಿ
ಬರೆದಿರುವೆಯಲ್ಲದಪರಾಜಿತೇಶ್ವರ ಶತಕ
ರತ್ನಾಕರಾಧೀಶ ಶತಕಗಳ ತ್ರೈಲೋಕ
ಶತಕವನ್ನಧ್ಯಾತ್ಮ ಗೀತಗಳನೋಜೆಯಲಿ
ರಚಿಸಿರುವೆ. ನಮ್ಮ ದಕ್ಷಿಣ ಕನ್ನಡದೊಳಿರುವ
ಮೂಡಬಿದರೆಯೊಳಿದ್ದೆ ರಸಿಕ ಜನ ಸಂಜೀವ !

೧೯೪೪

# ಮಹಾದೇವಿಯಕ್ಕ

ಶಿವಶರಣೆ, ಕನ್ನಡಿತಿ, ಓ ಮಹಾದೇವಿಯೇ!
ಅಧ್ಯಾತ್ಮ ಜೀವಿ, ನಿನ್ನತುಲ ವೈರಾಗ್ಯಕೆಣೆ
ಯಾವುದೈ? ವೀರಶೈವದೊಳೆಲ್ಲಿಯೂ ಕಾಣೆ
ಉಡುತಡಿಯ ಮಹಾರಾಜ ಕೌಶಿಕನನೊಲ್ಲದೆಯೆ,
ಪತಿಯೆಂದು ಸ್ವೀಕರಿಸಿ, ಅವನಂತಪುರದಿಂದ
ಪರಿದೋಡಿ, ಉಟ್ಟ ಬಟ್ಟೆಯ ಬಿಟ್ಟು, ಕಲ್ಯಾಣ-
ದೆಡೆಗೈದಿ, ಅನುಭವದ ಮಂಟಪದಿ ಬಸವಣ್ಣ-
ನಿಂದ ಭಕ್ತಿಯ ಕಲಿತು, ಅಲ್ಲಮಪ್ರಭುವಿಂದ
ಜ್ಞಾನ ಮಾರ್ಗವನರಿತು, ಮಧುರ ಭಾವವನಾಂತು,
ಶ್ರೀ ಚೆನ್ನಮಲ್ಲಿಕಾರ್ಜುನ ದೇವ ವಿರಹದಲಿ
ಸಂತಪ್ತೆಯಾಗಿ, ಸಿರಿಗನ್ನಡ ಭಾಷೆಯಲಿ
ವಚನಗಳ ಹಾಡಿದೈ ಕಾವ್ಯ ವಾಣಿಯನೋತು!
ಯೋಗಾಂಗ ತ್ರಿವಿಧಿ–ಸೃಷ್ಟಿಯ ವಚನ ಮೊದಲಾದ
ಗ್ರಂಥವನು ವಿರಚಿಸಿದೆ; ಕಬ್ಬಿಗಿತಿಯದರಿಂದ

೧೯೪೪

# ಲಕ್ಷ್ಮೀಶ

'ಕವಿ ಚೂತ ವನ ಚೈತ್ರ' ಲಕ್ಷ್ಮೀಶ! ನಿನ್ನ ಮಲ
ವಾರ್ಧಿಕದ ಷಟ್ಪದಿಯ ಝೇಂಕಾರ ಕನ್ನಡದ
ನಂದನದೊಳಾನಂದ ಮಧುಮಾಸದುತ್ಸವದ
ಸುವಿಲಾಸ ಚೆಲ್ಲಿಹುದು. ವರ ಸಂಸ್ಕೃತದ ಮೂಲ-
ವಾದ ಜೈಮಿನಿ ಮುನಿಯ ಭಾರತವನನುವದಿಸಿ,
ಅದರ ವಿಸ್ತಾರ ಪೌರಾಣ ಕಥನ ಕ್ರಮವ
ಅಲ್ಲಲ್ಲಿ ಸಂಕುಚಿಸಿ, ಪಾತ್ರಕಳೆ, ರಸಭಾವ
ಕೆಡದಂತೆ ಕೃಷ್ಣ ಚರಿತಾಮೃತವಿದೆಂದೆನಿಸಿ-
ಕೊಳ್ವಂತೆ ಕನ್ನಡದ ಜೈಮಿನಿ ಭಾರತವ
ಬರೆದಿರುವೆ—ವೀಣೆಯಿಂ ಗಾನವನು ನುಡಿಸಂತೆ,
ದೇವಪುರ ನಿಲಯ ಲಕ್ಷ್ಮೀರಮಣನೊರೆದಂತೆ
ಜಾನಕಿಯ ವನವಾಸ, ಶಶಿಹಾಸನುರುದೈವ
ಭಕ್ತಿ, ವೀರ ಸುಧನ್ವನಾಖ್ಯಾನ ಮೊದಲಾದ
ವೈಶಿಷ್ಟ್ಯ ಕನ್ನಡದ ರಸಿಕ ಕುಲ ಕಾಮೋದ

೧೯೪೩

## ಕವೀಂದ್ರ - ರವೀಂದ್ರ

ತನ್ನ ನೂತನವಾದ ಸಾಹಿತ್ಯ ಸೃಷ್ಟಿಯಿಂ
ವಂಗ ವಾಙ್ಮಯ ವಾರಿನಿಧಿಯನುದ್ರೇಕಿಸುತ
ತೊಳಗಿ ಬೆಳಗಿದೆ ಕವಿಯೆ! ಭಾರತದ ಭಾಗ್ಯಾಂತ
ರಿಕ್ಷದಲಿ ಚಂದ್ರನೋಲ್ ನಿಜ ಕೀರ್ತಿ ರಶ್ಮಿಯಿಂ
ವಿಶ್ವದಿಙ್ಮಂಡಲ ವ್ಯಾಪನವ ನೆರೆ ಗೈದು
ನೀನು ಬರೆದತಿ ಮುಖ್ಯ 'ಗೀತಾಂಜಲೀ' ನಾಮ
ಸದ್ಗ್ರಂಥ ರತ್ನಕ್ಕೆ ಬೆಲೆಯಾಂತೆ ನಿಸ್ಸೀಮ-
ಗೌರವದ 'ನೋಬೆಲೆಂ' ಬಹುಮಾನದೊಳ್ಪಿರಿದು.
ಓ ಕವೀಂದ್ರ ರವೀಂದ್ರನಾಥ ಠಾಗೋರ ವರ!
ನಿನ್ನ ಬೆಳ್ನಿಡುಗಡ್ಡಗೂದಲುಗಳಿಂ ಮೆರೆವ
ಭವ್ಯ ಭೌತಿಕ ದೇಹ ರೂಪವಂತರ್ಧಾನ-
ವನು ತಳೆದರೂ, ಭಾರತೋಚ್ಚ ಸಂಸ್ಕೃತಿ ಸಾರ
ಸರ್ವಸ್ವ 'ವಿಶ್ವ ಭಾರತಿ' ಯಂತೆಯೇ ಶಾಂತಿ
ಕೇತನಾದಿಗಳಿಂದು ಬೀರುವುವು ನವಕಾಂತಿ!

೧೯೪೧

# ಅಂಬಿಕಾತನಯದತ್ತ

ಅಂಬಿಕಾತನಯ ದತ್ತರೆ! ನಿಮ್ಮ ಲೇಖನಿಯು
ಕನ್ನಡದ ಕವನ ಸಾಹಿತ್ಯ ಜೀವನದಲ್ಲಿ
ಛಂದಸ್ಸು—ಭಾಷೆ—ಲಯ—ಬೆಡಗು—ಧಾಟಿಗಳಲ್ಲಿ
ಅಮೃತ ಸಂಜೀವಿನಿಯನೆರೆದ ಮೋಹನ ಖನಿಯು!
ಕವನ ವನದಲಿ ತೂಗುತಿರುವ ನಿಮ್ಮುಯ್ಯಾಲೆ-
ಯಲ್ಲಿ ಭಾವಾನಂದ ಪಡದವರದಾರಿಹರು?
ನಾದಲೀಲೆಯ ನಾದಲಾಸ್ಯಕೊಸೆಯದರಾರು?
ಸಾಹಿತ್ಯ-ಶಾಸ್ತ್ರ-ಸಂಶೋಧನಂಗಳ ಶಾಲೆ-
ಯಲ್ಲಿ ನಿಮ್ಮ ವಿಚಾರ ಧಾರಾ ವಿಮರ್ಶೆಗಳು
ಹರಟೆ—ಹುಚ್ಚಾಟಗಳ ಹೂನಗೆಯ ವಯ್ಯಾರ,
ಕತೆ-ನಾಟಕಂಗಳ ನಿರೂಪಣಾಲಂಕಾರ,
ರಸಿಕ ಸಾಹಿತಿಗಳಿಗೆ ಹರ್ಷ ರಸ ಘುಟಿಕೆಗಳು!
ಕನ್ನಡದ ಪರಿವರ್ತನೆಯ ಸಂಧಿಕಾಲದಲಿ
ನಿಮ್ಮ ನವ ಪಂಥಾನ ಮಾಸದೀ ರೀತಿಯಲಿ

೧೯೪೬

# ನನ್ನ ಜೀವನದಲ್ಲಿ,—

೧೯೧೬—, ೪೫

೧

ತುಳುನಾಡಿನೊಂದು ಕೇಂದ್ರದೊಳೊಗೆದರೂ ಕೂಡ
ಕನ್ನಡದ ಕುಲದಲ್ಲಿ ಜನುಮವಾಯ್ತು
ಕೋಟ ಬ್ರಾಹ್ಮಣರೆಂಬ ನಾಮರೂಢಿಯ ವಂಶ-
ದಲ್ಲಿ ಚೊಚ್ಚಲ ಕುವರನಾಗಿ ಹುಟ್ಟಾಯ್ತು

೨

ತೊಟ್ಟಿಲಲಿ ಪಟ್ಟಿರಲು ಕನ್ನಡದ ಜೋಗುಳವು
ಕಿವಿಗಮೃತ ಕರೆಯುತಿರೆ ಅಳಲ ನಾನುಳಿದೆ
ಮನೆಯೊಳಗೆ ಕನ್ನಡದ ಜೇನ್ನುಡಿಯ ಸವಿಯಿಂಪು
ಹರಿಯುತಿರೆ ಹಳ್ಳಿಯೊಳಗೆಳವೆಯನು ಕಳೆದೆ

೩

ಬಾಲ್ಯ ಕಳೆವುದರೊಳಗೆ ಮಾತೃ ವಾತ್ಸಲ್ಯವನು
ಚಿರಕಾಲ ಬಿಟ್ಟಿರುವ ದುರ್ವಿಧಿಯು ಬಂತು
ಆದರೇಂ? ತಂದೆಯೊಂದಕ್ಷಯ್ಯ ಸನ್ಮಮತೆ
ಕೂಡಿರುವುದವ್ಯವಚ್ಛಿನ್ನತೆಯನಾಂತು

೪

ಒಡಹುಟ್ಟು ತಮ್ಮಂದಿರಿಬ್ಬರೊಡನಾಟದಲಿ
ಬಾಳು ದಾಂಗುಡಿಯಿಟ್ಟು ದಾಟಿ ಬರುತಿರಲು,
ಬಾಲ ವೈಧವ್ಯ ದೀಕ್ಷಾ ವಿಧಿಯನಾಂತಿರುವ
ಸೋದರತ್ತೆಯೆ ಸಾಕುತಾಯಿಯಾಗಿರಲು,—

೫

ಮೊದಮೊದಲು ಅವರೊರೆದ ಕಾಗೆ-ಗುಬ್ಬಚ್ಚಿಗಳ
ಕಟ್ಟುಕತೆಗಳ ಕೇಳಿ ಸಂತಸವ ಸವಿದೆ
ಬಳಿಕ ರಘುರಾಮ-ಬಲರಾಮ-ಕೃಷ್ಣಾದಿಗಳ
ಪೌರಾಣ ಕಥೆಗಳಿಗೆ ಕಿವಿಯ ನಿಮಿರಿಸಿದೆ

೬

ಹಳ್ಳಿಯೂರಿನದೊಂದು ಸಂಸ್ಕೃತದ ಶಾಲೆಯಲಿ
ಕನ್ನಡವ ಸಕ್ಕದವನೊಂದೊಂದಿಗರಿತೆ
ಕತೆಯ ಕೇಳಿಕೆಯಿಂದ ವಾಚನದೊಳಭಿರುಚಿಯು
ಬಳೆದು ದೊರೆತಷ್ಟ ಹೊತ್ತಗೆಯೋದನಾಂತೆ

೭

ಮನಕೆ ಬೇಕಾದಷ್ಟು ಪುಸ್ತಕವು ದೊರೆಯದಿರೆ,
ವಾಚನದ ಹಸಿವು ಧಗಧಗಿಸಿ ಉರಿಯುತ್ತ,
ಅಲ್ಪ ಸಂತೃಪ್ತಿಯಲಿ ಹಳ್ಳಿಯೋದನು ಕಳೆದ
ಹಳೆಯ ನೆನಪಳಿಯದಿದೆಯೀಗಲಿದೆಯುತ್ತ

೮

ಗದುಗು ಭಾರತ, ತೊರವೆ ರಾಮಾಯಣಾದಿಗಳ
ದಿನದಿನವು ಪಾರಾಯಣದ ರೀತಿಯಿಂದ
ಸೋದರತ್ತೆಯು ಓದುತಿರುವ 'ದಂಡಾಕಾರ'
ಧಾಟಿ ತೋರಿತ್ತು ಹಳೆಗನ್ನಡದೊಳಂದ

೯

ಗೀರ್ವಾಣ ವಾಣಿ-ಹಳೆಗನ್ನಡದ ಸಾಹಿತ್ಯ
ಸಾಗರದ ಶಿಕ್ಷಣ ಪ್ರೌಢತೆಯನಾಂತು,
ಮದ್ರಾಸು ವಿಶ್ವವಿದ್ಯಾನಿಲಯದವರಿಂದ
ಮೊತ್ತ ಮೊದಲಾಗಿ ವಿದ್ವತ್ಪದವಿ ಬಂತು !

೧೦

ಪ್ರೌಢ ಶಿಕ್ಷಣದಲ್ಲಿ ಪುಸ್ತಕವನಿತ್ತಾಗ
ಕವನ ಕಾಮಿನಿಯೊಲಿದಪಾಂಗವೀರಿದಳು
ಹರಯ ಹದಿನೆಂಟರ ಸುಮಾರಿನಲಿ ಕನ್ನಡದ
ಕಾವ್ಯ ವನಿತೆಯು ಬಂದು ಮಾಲೆ ಸೂಡಿದಳು

೧೧

ಒಡನಾಡಿ ಗೆಳೆಯರೊಡಗೂಡಿ ‘ ಮಕ್ಕಳ ಬಳಗ ’
ನಡೆಸಿದೆವು ಶಿಕ್ಷಣವ ಪಡೆಯುತಿರುವಾಗ
ಆಗಲೇ ಕೈಬರೆಹ ‘ ನಗು ’ ಮಿನುಗಿ, ‘ ಶ್ರೀ ಮುಖ ’ ದ
ಗೆಳೆಯನೊಂದಿಗೆ ಬರೆದೆ ಕವನವಾಗಾಗ

೧೨

ಪುಟ್ಟಪ್ಪನವರ ‘ ನಲವಿ’ ನ ನಲಿತಕೊಸೆದಿದ್ದೆ;
‘ ಪಾಂಚಜನ್ಯ ’ ದ ಗಂಡುದನಿಗೆ ಮರುಳಾದೆ!
ಗುಂಡಪ್ಪ, ಮಾಸ್ತಿ, ಶಂಕರ ಭಟ್ಟ, ಪೈ, ಬೇಂದ್ರೆ,
ಬೆಟಗೇರಿ ಮೊದಲಾದ ಕವಿಗಳನ್ನೊಲಿದೆ !

೧೩

ಮಾಘ-ಭಾರವಿ-ಕಾಳಿದಾಸ-ವಿದ್ಯಾನಾಥ
ದಂಡಿ–ವಾಮನರನ್ನು ಸಂಸ್ಕೃತದಿ ಕಲಿತು,
ಇವರ ಕೃತಿ ಕನ್ನಡಕೆ ಬೇಕೆಂಬ ಎದೆಕುದಿತ-
ವುಂಟಾಯ್ತು ಸಾಹಿತ್ಯ ಹೃದ್ಯತೆಗೆ ಸೋತು

೧೪

ಪಂಪ-ನೃಪತುಂಗ-ತಿರುಮಲೆಯಾರ್ಯ-ಪೊನ್ನಕವಿ
ರನ್ನ-ಕೇಶೀರಾಜ-ರುದ್ರಭಟ್ಟರನು
ನಾಗವರ್ಮ-ಷಡಕ್ಷರಾರ್ಯ-ಮುದ್ದಣ-ಸಾಳ್ವ
ಆಂಡಯ್ಯ-ಸಿಂಗಾರ್ಯ-ನಾರಣಪ್ಪರನು,—

೧೫

ಗ್ರಂಥ ಮುಕುರದಿ ಕಂಡು, ಕಾವ್ಯ ಜೀವನಕೋತು
ಹಿರಿಗುರಿಯು ಸಾಧಿಸುವ ಹಂಬಲೆನಗಾಯ್ತು
ಹಳೆಗನ್ನಡದಿ ಕೂಡ ಪ್ರಗತಿ ಶೀಲತೆಯುಂಟು,
ಸಂದೇಹವಿಲ್ಲೆಂಬ ಬೋಧೆಯಾಯ್ತು

೧೬

ಆಂಗ್ಲ ಭಾಷೆಯನಸಿತು ಕಲಿತು, ಹಿಂದೀ ರಾಷ್ಟ್ರ
ಭಾಷೆಯಲಿ ವಿದ್ವತ್ತೆಯನು ಪಡೆದುಕೊಂಡು,
ಓದಿದೆನು ಮೈಥಿಲೀ ಶರಣಗುಪ್ತನು ಪ್ರೇಮ-
ಚಂದಾದಿ ಸಾಹಿತಿಗಳನ್ನಾಯ್ದುಕೊಂಡು

೧೭

ಹಳೆಯ ತುಲಸೀದಾಸ, ಕವಿ ಕಬೀರ, ರಹೀಮು
ಭಕ್ತೆ ಮೀರಾಬಾಯಿ ಮೊದಲಾದ ಸಾಧು-
ಸಂತ ಕವಿ-ಕವಯಿತ್ರಿಯರ ಮನೋಹರವಾದ
ಭಕ್ತಿ ಸಾಹಿತ್ಯ ವಾರ್ಧಿಯೊಳಾಳ್ದಿನೊಲಿದು

೧೮

ಇನಿತರಲಿ ಹಲಕೆಲವು ಕನ್ನಡದ ಕವನಗಳು
ಖ್ಯಾತ ‘ ತ್ರೀವೇಣಿ ’— ‘ ಜಯ ಕರ್ನಾಟಕಾ ’ ದಿ
ಮಾಸ ಪತ್ರಿಕೆಗಳಲಿ ಮುದ್ರಣದಿ ಮೈದೋರೆ
ಸಾಹಿತ್ಯ ಸುಮನಸರು ನಲವಾಂತರೋದಿ

೧೯

ನಾವು ಕೈಬರೆಹದಲಿ ಬರೆದಿರುವ ಕವನಗಳೆ
ನಮ್ಮ ಕಣ್ಮುಂದೆಯೇ ಅಚ್ಚಿನಲಿ ಬರಲು,
ನಮ್ಮ ಹೊಟ್ಟೆಯೊಳೊಗೆದ ಬಾಲಕರ ಮುದ್ದುನಗೆ
ಕಂಡಷ್ಟು ಸಂತೋಷವಾಯಿತಾ ಹಗಲು

೨೦

ಜೀವನದ ವೃತ್ತಿಯಧ್ಯಾಪನವನಾಂತಾಗ
ಊರ ಸಂಸ್ಕೃತ ಮಾತೃಶಾಲೆಯೊಳಗಲ್ಲಿ
ಸಹಪಾಠಿ ಕತೆಗಾರ ಗೆಳೆಯನೊಗ್ಗೂಟದಲಿ
ಮನವಾಯ್ತು ಕನ್ನಡದ ಸತ್ಸೇವೆಯಲ್ಲಿ

೨೧

ಕಟ್ಟಿ 'ಕನ್ನಡದ ಸೇವಾ ಸಂಘ' ವನ್ನೊಲಿದು,
ಕೆಲಗಾಲ 'ಸುಧೆ' ಯೆಂಬ ಮಾಸಿಕವ ಬರೆದು,
ಕನ್ನಡ ಗ್ರಂಥಗಳ ಸಂಗ್ರಹವನನುಗೈದು
ತಿಳಿಪಿದೆವು ವಾಚನದ ರುಚಿ ಜನರಿಗೊರೆದು

೨೨

ಕೆಲಕೆಲವು ಶಿಷ್ಯ ಮಿತ್ರರಿಗೊಸೆದು ಸಕ್ಕದವ
ಹಳೆಗನ್ನಡವ ಕೂಡ ಪಾಠ ಹೇಳಿದೆನು
ಕ್ರೈಸ್ತರೂ ತುಳುವರೂ ಕನ್ನಡದಿ ಸವಿಯನ್ನು
ಓದಲೆಂದಾವಷ್ಟು ಯತ್ನವೆಸಗಿದೆನು

೨೩

ಇಂತು ಪುರುಷಾಯುಷ್ಯದಲಿ ಕಾಲು ಶತಮಾನ
ದಾಟುತಿರೆ ನನ್ನಾಕೆ ಬಂದು ಕೈವಿಡಿದು,
ಮನೆಯನ್ನು ಮನವನ್ನು ನಗುವಿಂದ ಬೆಳಗಿಸುತ,
ಬಾಳ ಹಸುರಾಗಿಸಿದಳೊಲವಿನಲಿ ಕೋದು

೨೪

ಶೃಂಗಾರ ಕವನಗಳಿಗವಳೆ ಸ್ಫೂರ್ತಿಯ ಬುಗ್ಗೆ-
ಯೊಂದೊಪ್ಪಿಕೊಂಡರೇಂ ಹಾಸ್ಯಕೆಡೆ ಬಂತೇ ?
ಅವುಗಳನ್ನೋದಿ ಹೇಳಿದರವಳ ಮೊಗ ಲಜ್ಜೆ-
ಯಿಂದ ನಸುಗೆಂಪಾಗಲದುವೆ ಸಾರ್ಥಕತೆ

೨೫

ಕಪಿಕರ್ಮದಲಿ, ಹಳತು–ಹೊಸತೆಂಬ ವಾದದಲಿ
ಹುರುಳೆ ಕಾಣಿಸದೆನಗೆ; ಭಾವವೇ ಜೀವ
ಹಳತೇನು?—ಹೊಸತೇನು?—ಯಾವುದೆದೆಯರಳಿಪುದೊ
ಬಾಳ ಮೇಲೆತ್ತುವುದೊ—ಅದೆ ಭವ್ಯ ಕಾವ್ಯ!

೨೬

ಕವಿತೆಯುಲಿ ಭಾವ ವೈಶದ್ಯವುತ್ತಮ ಗುಣವು;
ಓದಿದೊಡನೆಯೆ ಹೃದ್ಯರಾನಂದ ಪಡೆದು,
ತಮ್ಮ ಬಾಳ್ಗೋಟಲೆಗಳನ್ನಷ್ಟು ಕಾಲವೂ
ಮರೆತರದುವೇ ಫಲವು ಸಾಹಿತ್ಯಕಿಹುದು

೨೭

ಸ್ವಾನುಭವದಾಳದಿಂ ಭಾವಮುಕ್ತಾಫಲವು
ದೊರಕಿದರದೇ ರಸಿಕರೆದೆಗೆ ಭೂಷಣವು!
ನಮ್ಮೆದೆಯ ಮುಟ್ಟಿದುದೆ ಇತರರೆದೆ ತಟ್ಟುವುದು;
ಇದು ಹೊರತು ಕಾವ್ಯಫಲ ಬರಿದೆ ನಿಷ್ಫಲವು!!

೨೮

ಸ್ವಾತಂತ್ರ್ಯವುಂಟೆಂದು ಮಾರ್ಗವನು ಮೀರುವುದು,
ಭಾಷೆಯನು ಕೆಡಿಸುವುದು, ಅದು ಹೊಲ್ಲ–ಸಲ್ಲ!
ಹತ್ತು ಜನ ನಡೆದಂತೆ ನಡೆಯುವುದು ನೀತಿಯಿದೆ
ಅಂಧಾನುಕರಣವೆಂತೂ ಒಳ್ಳಿದಲ್ಲ!

೨೯

ಈ ಪಂಥದಲಿ ಸಾಗಿ, ಹತ್ತು ವರುಷಗಳೀಚೆ
ಹತ್ತಿರದೊಳೆಂಭತ್ತು ಕವನ ಬರೆದಿಹೆನು
ಸಂಸ್ಕೃತ ‘ಕುಮಾರ ಸಂಭವ’ ವನ್ನು ಕನ್ನಡದ
ಜಗತಿಗಾಸ್ವಾನಿಸಲು ಯತ್ನಿಸುತ್ತಿಹೆನು

೩೦

‘ಮೋಹಾಂಧೆ’ ಮೊದಲಾದ ನಾಲ್ಕು ಏಕಾಂಕಗಳ
ರೂಪಕಂಗಳ ಬರೆದೆ ಗೀತ ರೂಪದಲಿ
ಕವಿ ಕಾಳಿದಾಸ ‘ಮಾಳವಿಕಾಗ್ನಿ ಮಿತ್ರ’ ವನು
ಬರೆದೆ ಕನ್ನಡದ ಗದ್ಯಾನುವಾದದಲಿ

೩೧

ಹಳ್ಳಿ ಮೂಲೆಯ ಬಾಳು, ಕಾಡಿನಳಲಿನ ಗೋಳು!
ಸಾಹಿತ್ಯ ಸಸ್ಯಕ್ಕೆ ನೀರೆರೆವರಿಲ್ಲ
ಬರೆಯುವುತ್ಸಾಹಕ್ಕೆ ಬೆನ್ನು ತಟ್ಟುವರಿಲ್ಲ
ಆತ್ಮ ಸಂತೋಷವೊಂದೇ ನಮ್ಮದೆಲ್ಲ

೩೨

ಮೊನ್ನೆ ರಬಕವಿಯಲ್ಲಿ ಸಾಹಿತ್ಯ ಪರಿಷತ್ತು
ಸಮ್ಮೇಳಗೊಂಡಾಗ ಕನ್ನಡೋತ್ಸವವ
ನೋಡಿ ಎದೆಹಿಗ್ಗಿ, ಹಿರಿಸಾಹಿತಿಗಳಮೃತಮಯ
ವಾಣಿಯಿಂದಾಂತೆನುತ್ಸಾಹ ಚೇತನವ

೩೩

‘ರೀತಿ ಬದ್ಧಗಳಿಹುದು ನಿಮ್ಮ ಕವಿತೆಗಳಿ’ಂದು
ಮಾತು-ಕತೆಯಲಿ ಬೇಂದ್ರೆಯವರು ನುಡಿದಾಗ,
ರಾಜರತ್ನರು ಮಾಸ್ತಿಯವರು ಕನ್ನಡದಲ್ಲಿ
ಕಾಳಿದಾಸನ ಕಂಡು ಮೆಚ್ಚಿಕೊಂಡಾಗ,—

೩೪

ಆತ್ಮ ಧನ್ಯತೆಯಿಂದ ಸಂತೋಷ ಸಮನಿಸಿತು
ಮರುಭೂಮಿಯಲಿ ಹಸುರು ಕಂಡ ತೆರನಾಯ್ತು!
ಮೈಸೂರು-ಧಾರವಾಡಗಳಂತೆ ನಮ್ಮಲ್ಲಿ
ಪ್ರೋತ್ಸಾಹವಿಲ್ಲದಿರೆ ಬಲುಬೇಸರಾಯ್ತು!

೩೫

ಬುದ್ಧಿಯಿಲ್ಲದೆ ಗೈವ ಯುದ್ಧವೇ ವಿಶ್ವವನು
ಕುರುಡುಗೊಳಿಸಿದೆ ಮತ್ತೆ ಸಾಹಿತ್ಯವೆಲ್ಲಿ?
ಆರ್ಥಿಕದ ಮುಗ್ಗಟ್ಟು ಬಡತನವನಪ್ಪಿರಲು,
ಪುಸ್ತಕ ಪ್ರಕಟನೆಗೆ ದಾರಿಯಿಹುದೆಲ್ಲಿ?

೩೬

ಪಟ್ಟಣದ ಕ್ರೈಸ್ತ ಶಾಲೆಯೊಳೀಗ ಕನ್ನಡಾ-
ಧ್ಯಾಪನೋದ್ಯೋಗವಿದ್ದರು ಕೂಡ, ನಮ್ಮ
ದೇಶ ಭಾಷಾಧ್ಯಾಪಕರಿಗಲ್ಪ ವೇತನವ-
ನೀಯುವುದು ಸರಕಾರದವರ ದುಷ್ಕರ್ಮ!

೩೭

ಆಗಕಾರಣದಿಂದ ಹೊಟ್ಟೆಪಾಡಿನ ಚಿಂತೆ
ಪಾಠಶಾಲಾ ಕಾಲ ಮುಗಿದಿರುವ ಮೇಲೂ,
ವಿದ್ಯೆಯನು ಸಮಯವನು ಹಣಕಾಗಿ ಮಾರುವುದು!
ಬರಿದಹುದು ಸಾಹಿತ್ಯ ಸೃಷ್ಟಿಗಿಹ ಬಾಳು

೩೮

ಆದರೂ ದುಃಖವನು ಸುಖವೆಂದು ತಿಳಿವೊಂದು
ಕವಿ ಹೃದಯವಿದೆಯೆಂದು ಹಿಗ್ಗು—ನಲಿವುಂಟು!
ನಮ್ಮಿಂದಲಾದಷ್ಟು ಕನ್ನಡದ ಸಾಹಿತ್ಯ
ಸೇವೆಯೆಸಗುವ ಹುರುಪು ಮನದೊಳುಂಟು!!

೧೯೪೫

# ಅಚ್ಚು ತಪ್ಪು ತಿದ್ದಿಕೆ

| ಪುಟ | ಪದ್ಯಪಂಕ್ತಿ | ತಿದ್ದಿದ ಪಾಠ |
|---|---|---|
| ೧೨ | ೧೭ | ಸಂದೇಶವೊಂದನು |
| ೧೫ | ೯ | ಬಜ್ಜರದ |
| ೧೯ | ೬ | ತಿರೆಯುಸು |
| ೨೩ | ೫ | ನವೋನ್ನತ |
| ೨೪ | ೪ | ಋಷಿಯ |
| ೩೦ | ೫ | ಬೋಧಾಮೃತ |
| ೩೪ | ೫ | ಹುಡುಗಿ |
| ೩೭ | ೮ | ನಡೆವುದು. |
| ೪೦ | ೧ | ಪೆಚ್ಚಾದ |
| ,, | ೪ | ನಂದಿಸುವೆ. |
| ೪೨ | ೪ | ಸೊಗದ |
| ೫೦ | ೧೭ | ವೀರ |
| ೫೧ | ೨ | ಉಲಿದರು |
| ,, | ೧೩ | ಏಳಿಗೆ |
| ೫೪ | ೭ | ಕಾವಿನ |
| ೬೩ | ೨೨ | ಫುಲ್ಲಾಕ್ಷ |
| ೬೪ | * | ಶ್ರೀ. ಡಿ. ವಿ. ಗುಂಡಪ್ಪನವರ 'ಉಮರನ ಒಸಗೆ'ಯನ್ನು ಓದಿದ ಮೇಲೆ ಬರೆದುದು. |
| ೬೬ | ೫ | (೧ನೇ ಪದ್ಯದ ೫ನೇ ಪಂಕ್ತಿಯು ೨ನೇ ಪದ್ಯದ ಆದಿಗೆ ಸೇರಿಹೋಗಿದೆ.) |
| ೮೨ | ೫ | ಬೆತೆಯಿಲ್ಲ |
| ,, | ೭ | ಸುಖ ಮುಖ |
| ,, | ೮ | ಬೋಧೆ |
| ೮೩ | ೧೪ | ಕವಿವುದು. |
| ೯೧ | ೧೮ | ಹೊಂದೊಡವುಗಳಿಗಿರುವುದಿಲ್ಲ. |

| | | |
|---|---|---|
| ೯೪ | ೧೪ | ಸ್ವಾತಂತ್ರ್ಯಹರ್ಷ |
| ೯೫ | ೪ | ವೀರಾವೇಶ |
| ೯೭ | ೪ | ನಾರಾಜ |
| ,, | ೫ | ಅಂತಪುರ |
| ,, | ೧೧ | ಸಿರಿಗನ್ನಡದ |
| ೯೮ | ೯ | ಜೈಮಿನೀ ಭಾರತ |
| ೯೯ | ೮ | ಬಿಟ್ಟಿರುವು |
| ೧೦೧ | ೯ | ಮಾನ್ಯ |
| ೧೦೨ | ೮ | ದೊರೆತಷ್ಟು |
| ೧೦೩ | ೯ | 'ನವಿಲಿ'ನ |
| ೧೦೪ | ೧೪ | 'ತ್ರಿವೇಣಿ' |
| ೧೦೫ | ೧೮ | ಯೆಂದೊಪ್ಪಿ |
| ೧೦೬ | ೧೬ | ಅಂಧಾನುಕರಣ |
| ,, | ೨೦ | ಜನತೆಗಾಸ್ವಾದಿಸಲು |
| ೧೦೭ | ೧೩ | ಬದ್ಧಗಳಿಹವು |

# ನಮ್ಮ ಪ್ರಕಟನೆಗಳು

| | | |
|---|---|---|
| ಗರಿ | ದ. ರಾ. ಬೇಂದ್ರೆ | ೨— ೦—೦ |
| ಮೇಘದೂತ | ,, | ೧— ೦—೦ |
| ಸಾಹಿತ್ಯದಲ್ಲಿ ಪ್ರಗತಿ | ವಿ. ಕೃ. ಗೋಕಾಕ | ೧— ೮—೦ |
| ತ್ರಿವಿಕ್ರಮರ ಆಕಾಶಗಂಗೆ | ,, | ೧— ೮—೦ |
| ಮೈಲು ಕಲ್ಲಿನೊಡನೆ ಮಾತುಕತೆಗಳು | ಕೋ. ಶಿ. ಕಾರಂತ | ೧— ೪—೦ |
| ಮುಂಗಾಲ್‌ಪುಟಿಗೆ | ಎನ್. ಕೆ. ಕುಲಕರ್ಣಿ | ೧—೧೨—೦ |
| ಚರಿತ್ರಹೀನ (ಕಾದಂಬರಿ) | ಶರಚ್ಚಂದ್ರ | ೬— ೪—೦ |
| ಪರಿಣೀತಾ ,, | ,, | ೧— ೦—೦ |
| ಮಹಾಪೂರ ,, | ಶ್ರೀ. ಗೋ. ಕುಲಕರ್ಣಿ | ೧— ೦—೦ |
| ನನ್ನ ಗೀತಗಳು | ,, | ೧— ೦—೦ |
| ಕಾಂಗ್ರೆಸ್ ಇತಿಹಾಸ | ಗುರುನಾಥ ಜೋಶಿ. | ೦—೧೨—೦ |
| ಬೆಟ್ಟದ ಹೊಳೆ (ಕಾದಂಬರಿ) | ಲಿಂಗಣ್ಣ ಸಿಂಪಿ | ೧— ೪—೦ |
| ದತ್ತಸಾಹಿತ್ಯ— | ,, | ೧— ೮—೦ |
| ಕವಿ ಅಂಬಿಕಾತನಯದತ್ತ | | ೧— ೦—೦ |
| ಪವಿತ್ರ ಜೀವನ (ಕಥಾ. ಸಂಗ್ರಹ) | ಟಾಲಸ್ಟಾಯ | ೧— ೮—೦ |
| ಪರ | ಅಮ್ಮೆಂಬಳ ಶಂಕರ ನಾರಾಯಣ | ೧—೧೨—೦ |

ಎಲ್ಲ ಪುಸ್ತಕಗಳನ್ನೂ ತರಿಸಿಕೊಳ್ಳುವವರಿಗೆ ಅಂಚೆವೆಚ್ಚವಿಲ್ಲ. ಅಂಥವರು ೨೬ ರೂಪಾಯಿಗಳನ್ನು ಮನಿಯಾರ್ಡರ ಕಳಿಸಬೇಕು—

ಮ್ಯಾನೇಜರ

**ಸಾಧನ ಮುದ್ರಣಾಲಯ**

**ಧಾರವಾಡ**